ಟಿ. ಎಸ್. ಮುರಿಗಪ್ಪಶ್ರೇಷ್ಠಿ ಬಿ.ಎಸ್‌ಸಿ. (ಅಗ್ರಿ)

# ಜೇನು



ಪ್ರಚಾರ ಪುಸ್ತಕಮಾಲೆ—೭೭
ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೧

ಮೈಸೂರು ವಿಶ್ವವಿದ್ಯಾನಿಲಯ
ಪ್ರಚಾರ ಪುಸ್ತಕಮಾಲೆ—೭೭ ೨೯. ೧೨. ೭೧

# ಜೇನು

ಡಿ. ಎಸ್. ಮುರಿಗಪ್ಪಶ್ರೇಷ್ಠಿ ಬಿ.ಎಸ್‌ಸಿ. (ಅಗ್ರಿ)



ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೭೧

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಪ್ರಾರಂಭವಾಗಿ ಇಂದಿಗೆ ಸುಮಾರು ಇಪ್ಪತ್ತೈದು ವರ್ಷಗಳಾಗಿವೆ. ಈ ಅವಧಿಯಲ್ಲಿ ೭೭ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ಕಾಲಾವಧಿಯನ್ನು ಗಮನಿಸಿದರೆ ಈಗ ಹೊರಬಿದ್ದಿರುವ ಕಿರುಹೊತ್ತಗೆಗಳ ಸಂಖ್ಯೆ ಈಗಿರುವುದಕ್ಕಿಂತಲೂ ದ್ವಿಗುಣವೊ ತ್ರಿಗುಣವೊ ಆಗಿರಬೇಕಾಗಿತ್ತೆಂದು ಹೇಳಬಹುದು. ಆದರೂ ಅವುಗಳ ಗುಣವನ್ನೂ ಅವು ಮಾರಾಟವಾಗುತ್ತಿರುವ ವೇಗವನ್ನು ಗಮನಿಸಿದರೆ ಈ ಮಾಲೆಯ ಉಪಯುಕ್ತತೆ ಮತ್ತು ಜನಪ್ರಿಯತೆ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಪುಸ್ತಿಕೆಯೂ ಮೂರು ನಾಲ್ಕು ಸಾರಿ ಮುದ್ರಿತವಾಗಿದೆ. ದಿನೇ ದಿನೇ ಈ ಮಾಲೆಯ ಬಗೆಗೆ ಜನರ ವಿಶ್ವಾಸಾದರಗಳು ಅಧಿಕವಾಗುತ್ತಿವೆ. "ಈ ತಿಂಗಳು ಏನಾದರೂ ಹೊಸ ಪುಸ್ತಿಕೆ ಬಂದಿದೆಯೆ? ಮುಗಿದು ಹೋಗಿರುವ ಪುಸ್ತಿಕೆಗಳು ಅಚ್ಚಾಗಿವೆಯೆ?" ಎಂದು ಮೇಲಿಂದ ಮೇಲೆ ಜನ ಕೇಳುತ್ತಿರುತ್ತಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿ; ನಾಡಿನ ಪ್ರಗತಿಯ ಒಂದು ಚಿಹ್ನೆ.

ನಾಡಿನಲ್ಲಿ ದಿನೇ ದಿನೇ ವಿದ್ಯಾವಂತರ ಮತ್ತು ಅಕ್ಷರಸ್ಥರ ಸಂಖ್ಯೆ ಬೆಳೆಯುತ್ತಿದೆ. ಕೇವಲ ಸಾಕ್ಷರತೆಯಿಂದ

ಮಹತ್ತ್ವದ ಪ್ರಯೋಜನವೇನೂ ಲಭಿಸದು. ಸಾಕ್ಷರತೆ ಬೇರೊಂದು ಸಿದ್ಧಿಗಾಗಿ ಸಾಧನವೇ ಹೊರತು ಅದೇ ಪರಮ ಗುರಿಯಲ್ಲ; ಜ್ಞಾನ ಸಂಪಾದನೆಯೇ ಪರಮ ಗುರಿ. ಈ ಗುರಿಯ ಸಾಧನೆಗಾಗಿ ಸಕಲ ಅನುಕೂಲತೆ ಗಳನ್ನು ಕಲ್ಪಿಸುವುದು ವಿಶ್ವವಿದ್ಯಾನಿಲಯದಂಥ ಸಂಸ್ಥೆ ಗಳ ಆದ್ಯಕರ್ತವ್ಯ. ಈ ಮೂಲಕ ವಿಶ್ವವಿದ್ಯಾನಿಲಯದ ಜ್ಞಾನವಾಹಿನಿ ನಾಡಿನ ಮೂಲೆಮೂಲೆಗೆಲ್ಲ ಹರಿದು, ಸಮಷ್ಟಿಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ.

ಈ ಮಾಲೆಯಿಂದ ಸಾಮಾನ್ಯ ಜನರಲ್ಲಿ ಜ್ಞಾನ ಪ್ರಸಾರ ಕಾರ್ಯ ತಕ್ಕಮಟ್ಟಿಗೆ ಯಶಸ್ವಿಯಾಗಿ ನಡೆದಿರು ವಂತೆಯೆ ಕನ್ನಡದಲ್ಲಿ ವಿಜ್ಞಾನ ಸಂಬಂಧವಾದ ವಿಷಯ ಗಳನ್ನು ಸುಲಭವಾಗಿ ಸರಳವಾಗಿ ಹೇಳಬಹುದು, ಮತ್ತು ಕನ್ನಡ ವೈಜ್ಞಾನಿಕ ಭಾಷೆಯಾಗಬಲ್ಲದು ಎಂಬ ಅಂಶ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಪುಸ್ತಿಕೆಗಳ ಪಟ್ಟಿ ಯನ್ನೊಮ್ಮೆ ಓದಿದರೆ ಸಂದೇಹವಾದಿಗಳ ಶಂಖೆ ಸಂಪೂರ್ಣವಾಗಿ ನಿವಾರಣೆಗೊಂಡು ಧೈರ್ಯ ಮೂಡ ದಿರದು. ಇವುಗಳಲ್ಲಿ ೫೪ ಪುಸ್ತಿಕೆಗಳು ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿ ವಿಜ್ಞಾನ, ಸಮಾಜ ವಿಜ್ಞಾನ, ವೈದ್ಯ ವಿಜ್ಞಾನ, ಗಣಿತ ವಿಜ್ಞಾನ, ಇತಿ ಹಾಸ ಮೊದಲಾದುವುಗಳಿಗೆ ಸಂಬಂಧಿಸಿದವು. ಉಳಿದ ೨೩ ಪುಸ್ತಿಕೆಗಳು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗೆ ಸಂಬಂಧಿಸದವು. ಇವುಗಳ ಗ್ರಂಥಕರ್ತರು ಪ್ರಮುಖ

ವಾಗಿ ವಿಶ್ವವಿದ್ಯಾನಿಲಯದಲ್ಲಿ ಹತ್ತಿಪ್ಪತ್ತು ವರ್ಷಗಳ ಕಾಲ ಪಾಠ ಹೇಳಿ ನುರಿತಿರುವ ಘನ ವಿಧ್ವಾಂಸರು. ಬಹಳ ಹಿಂದೆಯೇ ವೈಜ್ಞಾನಿಕ ಗ್ರಂಥಗಳ ರಚನೆಗೆ ಕೈ ಹಾಕಿ ಕನ್ನಡ ವೈಜ್ಞಾನಿಕ ಭಾಷೆಯಾಗುವ ಸಾಮರ್ಥ್ಯ ವನ್ನು ಪಡೆದಿದೆ, ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣಮಾಧ್ಯಮ ವಾಗುವ ಶಕ್ತಿಯನ್ನು ಪಡೆದಿದೆ ಎಂದು ತೋರಿಸಿಕೊಟ್ಟಿ ದ್ದಾರೆ. ಅವರೆಲ್ಲ ಅಭಿನಂದನಾರ್ಹರು.

ಈ ಮಾಲೆಯ ಕಾರ್ಯ ತ್ವರಿತಗೊಂಡು, ವಿಸ್ತಾರ ಗೊಂಡು ಪುಸ್ತಕಗಳ ಸಂಖ್ಯೆ ದಿನೇ ದಿನೇ ಬೆಳೆಯ ಬೇಕೆಂದೂ, ಇದರಿಂದ ಸಾಮಾನ್ಯ ಜನತೆ ಸಂಪೂರ್ಣ ಪ್ರಯೋಜನ ಪಡೆದು ಸಮಷ್ಟಿಪ್ರಜ್ಞೆ ಸರ್ವತೋಮುಖ ವಾಗಿ ವಿಕಾಸಗೊಳ್ಳಬೇಕೆಂಬುದೂ ವಿಶ್ವವಿದ್ಯಾನಿಲಯದ ಆಸೆ. ಕನ್ನಡನಾಡು ಒಂದುಗೂಡಿರುವ ಈ ಶಕ ಮುಹೂರ್ತದಲ್ಲಿ ಕನ್ನಡನುಡಿ ಆಡಳಿತದ ಭಾಷೆಯಾಗಿ, ವ್ಯವಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ, ಜನತೆಯ ಸಂಸ್ಕೃತಿವಿಕಾಸಸಾಧನದ ಭಾಷೆಯಾಗಿ ಮುಂದುವರಿಯುವುದರಲ್ಲಿ ಸಂದೇಹವಿಲ್ಲ. ವಿಶ್ವವಿದ್ಯಾ ನಿಲಯದ ಈ ಸೇವೆಯನ್ನು ಕರ್ನಾಟಕ ಸಂಪೂರ್ಣವಾಗಿ ತನ್ನ ಮೇಲ್ಮೆಗೂ ಏಳ್ಗೆಗೂ ಬಳಸಿಕೊಳ್ಳುತ್ತದೆಂದು ನಾವು ಹಾರೈಸುತ್ತೇವೆ.

ಮೈಸೂರು
೨೫–೧೧–೫೮

ಕೆ. ವಿ. ಪುಟ್ಟಪ್ಪ
ವೈಸ್–ಛಾನ್ಸಲರ್.

# ಕೃತಜ್ಞತೆ

ಜೇನಿನ ಸುಂದರ ಕಥೆಯನ್ನು ಕೇಳಿದ ನನ್ನ ಗೆಳೆಯ ವೃಂದ ಇದನ್ನು ಬರೆಯಲು ಸಲಹೆ ನೀಡಿ ಸಹಕಿರಿಸಿದರು —ಗೆಳೆಯ ವೃಂದಕ್ಕೆ ನನ್ನ ಕೃತಜ್ಞತೆಗಳು.

ಕೈಬರಹದ ಪ್ರತಿಯನ್ನು ಪರಿಶೀಲಿಸಿ ಅಮೂಲ್ಯ ಸಲಹೆಗಳನ್ನು ನೀಡಿ ಪ್ರೋತ್ಸಾಹಿಸಿದ ಮೈಸೂರು ಸರ್ಕಾರದಲ್ಲಿ ಕೀಟಶಾಸ್ತ್ರ ವಿಜ್ಞಾನದ ತಜ್ಞರೂ, ನನ್ನ ಪ್ರಾಧ್ಯಾಪಕರು ಆದ ಡಾ|| ಪುಟ್ಟರುದ್ರಯ್ಯನವರಿಗೆ ನನ್ನ ಹುತ್ಪೂರ್ವಕ ಕೃತಜ್ಞತೆಗಳು.

ಈ ಕೈಹೊತ್ತಿಗೆಯನ್ನು ಸ್ವೀಕರಿಸಿ ಪ್ರಕಟಿಸಿದ ಮೈಸೂರು ವಿಶ್ವವಿದ್ಯಾನಿಲಯದವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಜೇನಿನ ಜೀವನವನ್ನು ಕೇಳುವ ಕಥೆಯಾಗಿ ಮಧುರ ಮಾತುಗಳಲ್ಲಿ ಹೇಳಿದೆಯಾದರೂ ಇದರಲ್ಲಿ ಅಡಕವಾಗಿರುವ ವಿಷಯುಗಳು ಪೆರಿಪಕ್ವ ವೈಜ್ಞಾನಿಕ ವಿಷಯುಗಳಾಗಿವೆ.

ಶಿವಮೊಗ್ಗಾ ಡಿ. ಎಸ್. ಮುರಿಗಪ್ಪಶ್ರೇಷ್ಠಿ

## ವಿಷಯಾನುಕ್ರಮಣಿಕೆ

# ಜೇನು

## ಅಲಕಾವತಿಯ ತ್ಯಾಗಿಗಳು

ಸುತ್ತ ಹಸಿರು ಕಾಡಿನ ಕೋಟೆ, ಉನ್ನತ ಸಹ್ಯಾದ್ರಿ ಶಿಖರದ ಗೋಡೆ, ಕುಕ್ಕುಟ, ಮಯೂರ ಮಂಗಳ ಕಹಳೆಯೊಡಗೂಡಿ ಸಹ್ಯಾದ್ರಿಯ ಬತೇರಿ ಹತ್ತಿ ಸುಪ್ರಭಾತ ಸಾರುತ್ತಿದ್ದಾನೆ ತನ್ನ ಕಾಡನಾಡಿಗೆಲ್ಲ ಜಗ ದೇಕರಾಜ-ರವಿ. ನೆಚ್ಚಿನ ನಾಯಕನನ್ನು ಸ್ವಾಗತಿಸುವ ವೈಖರಿ, ಸೌಂದರ್ಯ, ಆನಂದ ಹೊಂಬಿಸಿಲ ಹೊದಿಕೆ ಯನ್ನು ಹೊತ್ತ ಮಲೆನಾಡಕಾಡಿಗೆ. ಹಸಿರು ಉಡಿಗೆ ಉಟ್ಟು ಬಣ್ಣ ಬಣ್ಣದ ತೊಡಿಗೆ ತೊಟ್ಟು ತಿಳಿನೀರ ಅಚ್ಚ ಬಿಳಿ ಝರಿಗಳ ಮೇಲು ಹೊದಿಕೆ ಹೊದ್ದು, ಹೂ ಹೆಡಿಗೆ ಹೊತ್ತು, ಸುಗಂಧದ ತಿಳಿಗಾಳಿ ಬೀರಿ ಸುತ್ತಲೂ ಮುತ್ತಿ ಬರುತ್ತಿದ್ದಾರೆ ವನದೇವಿಮಕ್ಕಳು ಚೈತ್ರಕನ್ನೆಯರು ರಾಜರವಿಗೆ ಹೂವಿನ ಹಾಸಿಗೆ ಹಾಸುತ್ತ—ಮುಗಿಲನ್ನು ಮಿಡಿದು ಬರುವ ಗುಂಜಾರವ, ಮಧುರ ಮರ್ಮರನಾದ —ಕತ್ತೆತ್ತಿ ನೋಡಿದೆ ಸಾವಿರ ಸಾವಿರ ಕರಿಯ ಚಿಕ್ಕೆಯ ಬಲೆಯೊಂದು ತೇಲುತ್ತಿತ್ತು. ಜೇನು ಹುಳುಗಳ ಹಿಂಡು ಹಾರಿ ಹಾರಿ ದಿಂಗತದ ಅನಂತತೆಯಲ್ಲಿ ಕರಗಿ ಹೋಯಿತು!

ಏನು?—ಕೊಬ್ಬಿ ಬೆಳೆದ ಹೆಮ್ಮರ, ಹೊಳೆವ ಹಿರಿಕರಿ ಮಣಿಯ ಜೋಳಿಗೆಯನ್ನು ಹಾಕಿದಂತೆ ಕೊಂಬೆಗೆ ಮುತ್ತಿ ಮೆತ್ತಿವೆ ಜೇನು. ಚೈತ್ರಕನ್ನೆಯರು ಹೊತ್ತು ನಿಂತಿರುವ ಮಾವು ಮಲ್ಲಿಗೆ, ತಾವರೆ ಕೇದಿಗೆ; ಜಾಜಿ ಸಂಪಿಗೆ; ಗುಲಗಂಜಿ ಗುಲಾಬಿ ಹೂಹೆಡಗೆಗಳಿಗೆ ಮುತ್ತಿಗೆಹಾಕಿ ಮಕರಂದವನ್ನು ಹೀರಿ ತರಲು ಹೊರಟಿವೆ ಕರ್ಮಯೋಗಿಗಳ ಬಳಗ. ತನ್ನ ಬಳಗದ ಜೇನ ಜಾಡಿ ಯನ್ನು ತುಂಬಿಕೊಂಡು, ಪುಷ್ಪಪರಾಗಗಳ ಮುಂಕರಿ ಗಳನ್ನು ಹೊತ್ತುಕೊಂಡು ಹಾರಿಬರುತ್ತಿವೆ ತಮ್ಮ ನೆಚ್ಚಿನ ನಗರಿಗೆ. ಮುತ್ತಿ ಮೆತ್ತಿರುವ ಹಿಂಡನ್ನು ಸೀಳಿ ನಗರದ ಒಳಹೊಕ್ಕು ಪುಷ್ಪ ಪರಾಗ ಮಕರಂದಗಳನ್ನು ಉಗ್ರಾಣ ಗಳಿಗೆ ಒಪ್ಪಿಸಿ ಮತ್ತೆ ಹಾರುತ್ತಿವೆ ಪುಷ್ಪಪರಾಗ-ಕ್ರೀಡೆಗೆ —ಏನು ದುಡಿಮೆ ಇದು? ಯಾವ ಸಿದ್ಧತೆ ಇದು? ತರುವ ಬುಟ್ಟಿ ಬುಟ್ಟಿ ಪರಾಗವಲ್ಲಿ ರೇಣೊಂದನ್ನು ಮುಟ್ಟಲಿಲ್ಲ. ಜಾಡಿ ಜೇನಿನಲ್ಲಿ ಹನಿಯೊಂದನ್ನು ಸವಿಯುತ್ತಿಲ್ಲ. ಈ ಕೆಲಸಗಾತಿಯರು ಹೀರಿ ತರುವ ಮಧು ಸ್ವಂತ ಹೊಟ್ಟೆಗೆ ಸೇರುವುದಿಲ್ಲ—ಬಳಗದ ಹೊಟ್ಟೆಯನ್ನು ಸೇರುತ್ತದೆ.*

---

*ಜೇನುಗಳಿಗೆ ಎರಡು ಹೊಟ್ಟೆ-ಒಂದು ಶರೀರ ಪೋಷಣೆಗಾಗಿ ಇರುವ ಹೊಟ್ಟೆ ಮತ್ತೊಂದು ಬಳಗದ ಉಪಯೋಗಕ್ಕಾಗಿ ಮಕ ರಂದವನ್ನು ಹೀರಿ ತುಂಬಿಕೊಂಡು ಬಂದು ನಗರದಲ್ಲಿ ಉಗ್ರಾಣ ಗಳಿಗೆ ಮಧುವನ್ನು ಒಪ್ಪಿಸಲು ಇರುವ ಹೊಟ್ಟೆ-"ಬಳಗದ ಹೊಟ್ಟೆ."

ತನ್ನ ಶರೀರ ಪೋಷಣೆಗಾಗಿ ಸ್ವಂತ ಹೊಟ್ಟೆಗೆ ಮೂರು ನಾಲ್ಕು ಹೂಗಳ ಮಕರಂದ ಸಾಕು. ಆದರೆ ಘಂಟೆಗೆ ೨೦೦-೩೦೦ ಹೂಗಳನ್ನು ಹೀರುವ ಬಿಡುವಿಲ್ಲದ ಈ ಮಕರಂದ ಶೇಖರಣೆ ಏಕೆ? ಯಾವ ಹೊಟ್ಟೆಗೆ?— ಬಳಗದ ಹೊಟ್ಟೆಯಲ್ಲಿ ತುಂಬಿ ತಂದ ಮಧುವನ್ನು ಬಂಗಾರದ ಉಗ್ರಾಣಗಳಲ್ಲಿಡುತ್ತವೆ ತಮ್ಮ ಬಳಗದ ಭಾವಿ ಜನಾಂಗಕ್ಕಾಗಿ.

ಕರಿಯ ಮುತ್ತುಗಳ ಮುದ್ದೆಯಂತಿರುವ ಜೇನು ಹುಳುಗಳ ಗುಂಪು ನಮ್ಮ ಕಣ್ಣಿಗೆ ಜಡಭರತರ ಕೂಟ. ಏನಿದು ಗಜಿಬಿಜಿ. ಏಕೀ ನೂಕು ನುಗ್ಗಲು? ಹಳ್ಳಿಯ ಹೆಡ್ಡನೊಬ್ಬ ವಿಮಾನದಲ್ಲಿ ಕುಳಿತು ಬಹಳ ಎತ್ತರದಿಂದ ಕಲ್ಕತ್ತಾ ಮುಂಬಾಯಿ ನಗರಗಳನ್ನು ನೋಡಿದಂತೆ ಏನೋ ಗುಂಪು, ಗುಂಪು ಓಡಾಟ ಒಂದೂ ತಿಳಿಯದು. ಅಂತೆಯೋ ನಮ್ಮ ಈ ನೋಟ. ಈ ಕರಿಯ ತೆರೆಯನ್ನು ಸರಿಸಿ ಮಾನವನು ಜೇನುಹುಳುವಿನ ಗಾತ್ರವನ್ನು ಪಡೆದು ನಿಂತು ನೋಡಿದರೆ—ಏನು ಸುಂದರ ಸುರನಗರಿ! ಮಾನವನು ಈವರೆಗೂ ನಿರ್ಮಿಸಲಾರದ ಶಿಸ್ತಿನ ಸಿರಿನಗರಿ! ಜೇನುಹುಳುಗಳ ಬಂಗಾರದ ನಗರಿ! ಪುಷ್ಪ ಪರಾಗ ಮಧು ಬಂಢಾರಗಳ ಸಾಲು ಸಾಲು ಕೇರಿಗಳು. ಅಲ್ಲಿ ಗಸ್ತು ತಿರುಗುತ್ತಿರುವ ಶಿಸ್ತಿನ ಶಿಪಾಯಿಗಳು, ಅಂತಸ್ತು ಅಂತಸ್ತಿನ ಬಂಗಾರದ ಇಟ್ಟಿಗೆಯ ಮನೆಗಳು. ರೇಖಾ ಗಣಿತ ಶಾಸ್ತ್ರ ಪ್ರವೀಣರು, ಕುಶಲ ಶಿಲ್ಪಿಗಳು ಕಟ್ಟಿದ

ಸುಂದರ ಸೌಧಗಳು. ವಿಶಾಲವಾದ ಸುವ್ಯವಸ್ಥಿತ ಬೀದಿಗಳು. ಎಲ್ಲೆಲ್ಲೂ ನಿರ್ಮಲ ವಾತಾವರಣ. ಈ ಮಹಾನಗರದೊಡನೆ ಹೋಲಿಸಲು ಮಾನವ ನಿರ್ಮಿತ ಯಾವ ನಗರವೂ ಇಲ್ಲ.

ಇಂದು ಈ ನಗರ ಸಕಲ ಸಂಪತ್ತಿನಿಂದ ತುಂಬಿ ಕುಬೇರನ ಅಲಕಾವತಿಯಂತೆ ಶೋಭಿಸುತ್ತಿದೆ. ೮೦-೯೦ ಸಾವಿರ ಜೀವಿಗಳ ಅನೇಕ ದಿನಗಳ ಬಿಡುವಿಲ್ಲದ ದುಡಿಮೆ ಹೊನ್ನ ನಗರವಾಗಿ ಮಕರಂದ ಪುಷ್ಪಪರಾಗಗಳ ಭಂಡಾರವಾಗಿದೆ. ಸಾವಿರಾರು ಉಗ್ರಾಣಗಳಲ್ಲಿ ನಗರದ ಎಲ್ಲರಿಗೂ ಅನೇಕ ವಾರಗಳು ಆಗುವಷ್ಟು ಆಹಾರವಿದೆ. ನಾನಾಬಗೆಯ ಪುಷ್ಪಪರಿಮಳದಿಂದ ಉನ್ಮತ್ತವಾದ ಪುಷ್ಪ ಪರಾಗ ಮಂದಿರಗಳ ಸಾಲುಗಳು ಕೆಂಪು, ಹಳದಿ, ನೀಲಿ, ಅಂಜೂರ ಬಣ್ಣಗಳಿಂದ ಕಂಗೊಳಿಸುತ್ತಿವೆ. ಅಲ್ಲೆ ಹತ್ತಿರದಲ್ಲಿ ಆಪತ್ಕಾಲಕ್ಕಾಗಿ ಕೂಡಿಟ್ಟ ಮಧುರ ಮಕರಂದ ಇಪ್ಪತ್ತು ಸಾವಿರ ಹೊನ್ನ ಕಳಶಗಳಲ್ಲಿ ತುಂಬಿ ನಿಂತಿದೆ. ಈ ಆಪತ್ಕಾಲದ ಉಗ್ರಾಣದ ಮುಚ್ಚಳಗಳನ್ನು ಮುಚ್ಚಿ ಮುದ್ರೆ ಒತ್ತಿದೆ. ಇನ್ನು ಸ್ವಲ್ಪ ಕೆಳಗೆ ಸಾವಿರಾರು ತೆರೆದ ಕೊಡಗಳಲ್ಲಿ ನಿತ್ಯದ ಉಪಯೋಗಕ್ಕಾಗಿ ಮಧು ತುಳುಕಿ ನಿಂತಿದೆ. ಕಾವಲುಗಾರ ಜೇನುಗಳ ಒಂದು ಗುಂಪು ಈ ಉಗ್ರಾಣಗಳನ್ನು ಎಚ್ಚರಿಕೆಯಿಂದ ಕಾಯುತ್ತಿವೆ. ನಗರ ಕೇಂದ್ರವಲ್ಲಿ ಅರಮನೆ. ಇಲ್ಲೆ ರಾಣಿ ಮತ್ತು ಅವಳ ಪರಿಚಾರಕರು ಇರುವುದು.

ಸುತ್ತ ಹತ್ತಾರು ಸಾವಿರ ಗೂಡುಗಳಲ್ಲಿ ಬೆಳೆಯುತ್ತಿರುವ ಮೊಟ್ಟೆಗಳು, ೧೫-೧೬ ಸಾವಿರ ಮನೆಗಳಲ್ಲಿ ಮೊಟ್ಟೆ ಯಿಂದ ಹೊರಬಂದ ಹುಳುಗಳು, ನಲವತ್ತು ಸಾವಿರ ಗೂಡುಗಳಲ್ಲಿ ಕೋಶಾವಸ್ಥೆಯ ಹುಳುಗಳು,—ಈ ಭಾವಿ ಜಗತ್ತನ್ನು ಎಚ್ಚರಿಕೆಯಿಂದ ಅಕ್ಕರೆಯಿಂದ ಪಾಲಿಸು ತ್ತಿರುವ ದಾದಿಯರು, ಪರಿಚಾರಕರು ಬಿಡುವಿಲ್ಲದೆ ದುಡಿಯುತ್ತಿದ್ದಾರೆ. ಮೂರು, ನಾಲ್ಕು, ಆರು ಅಥವಾ ಹನ್ನೆರಡು ಮುಚ್ಚಿ ಮುದ್ರೆಯೊತ್ತಿದ ಅರಮನೆಗಳು ; ಇವು ಪ್ರಾಯದ ಹಂತಕ್ಕೆ ಕಾಲಿಡುತ್ತಿರುವ ರಾಜಕುಮಾರಿ ಯರು ತಮ್ಮ ಕಾಲವನ್ನು ಎದುರು ನೋಡುತ್ತಾ ಸೆರೆ ಯಲ್ಲಿಯೆ "ರಾಜರಸ" ವನ್ನು ಸವಿಯುತ್ತ ಮಲಗಿರುವ ಮಂದಿರಗಳು. ನಿತ್ಯದ ಪುಷ್ಪಪರಾಗ ಮಕರಂದವನ್ನು ತರುವ ಕೆಲಸ ಸಾಕಾದಷ್ಟು ಆದಮೇಲೆ ಒಂದು ಗುಂಪು ನಗರ ಪ್ರವೇಶ ದ್ವಾರದಲ್ಲಿ ಸೇರಿ ವೇಗವಾಗಿ ತಮ್ಮ ರೆಕ್ಕೆ ಗಳನ್ನು ಬಡಿಯುವುದರಿಂದ ಹೊರಗಿನ ಒಳ್ಳೆಯ ಗಾಳಿ ಯನ್ನು ನಗರದೊಳಕ್ಕೆ ತುಂಬುತ್ತವೆ. ಮತ್ತೊಂದು ಗುಂಪು ನಗರದ ಇನ್ನೊಂದು ಕೊನೆಯಲ್ಲಿ ಸೇರಿ ವೇಗ ವಾಗಿ ತಮ್ಮ ರೆಕ್ಕೆಗಳನ್ನು ಬೀಸುತ್ತ ಒಳಗೆ ಬಂದ ಗಾಳಿ ಯನ್ನು ಹೊರಗೆಳೆದು ಹಾಕುತ್ತವೆ. ಹೀಗೆ ಒಳ್ಳೆಯ ನಿರಾರ್ದ್ರ ಮಂದಾನಿಲ ಪ್ರವಾಹ ನಗರದಲ್ಲೆಲ್ಲಾ ಹರಿದು ಆಗತಾನೆ ಶೇಖರಿಸಿದ ಪುಷ್ಪಪರಾಗ ಮಕರಂದದಲ್ಲಿದ್ದ ಹೆಚ್ಚುವರಿ ತೇವ ಆರಿಹೋಗಿ ಮಕರಂದ ಪುಷ್ಪಪರಾಗ

ಗಳು ಪಕ್ವವಾಗಿ ಬಹಳ ಕಾಲ ಇಡಲು ಯೋಗ್ಯವಾಗುತ್ತವೆ. ಸೆಕೆಯ ಕಾಲದಲ್ಲೂ ಈ ಸುವ್ಯವಸ್ಥಿತ ವಾತಾಯನ ಕ್ರಿಯೆ ನಡೆಯುತ್ತದೆ. ಪಕ್ವವಾದ ಮಕರಂದವಿರುವ ಉಗ್ರಾಣಗಳನ್ನು ಕಿರಿಯ ಕೆಲಸಗಾತಿಯರು ಶುದ್ಧ ಮೇಣದಿಂದ ಮುಚ್ಚಿ ಮುದ್ರೆಯೊತ್ತುತ್ತಾರೆ.

ಸಕಲ ಸಂಪತ್ತಿನಿಂದ ಕೂಡಿದ ಈ ಸುಂದರ ನಗರವನ್ನು ಬಿಡುವಿಲ್ಲದೆ ದುಡಿದು ನಿರ್ಮಿಸಿದ ೮೦–೯೦ ಸಾವಿರ ಜೇನು ಹುಳುಗಳಲ್ಲಿ ಇಂದು ಏನೋ ಗಡಿಬಿಡಿ, ಅಸ್ಪಷ್ಟ ಅವಿಶ್ರಾಂತಿ. ಸುವ್ಯವಸ್ಥಿತ ಭಾವಿ ಜನಾಂಗದ ಮಾತೆಯಾದ ರಾಣಿ ಏನೋ ಬೇರೆ ಸಿದ್ಧತೆ ನಡೆಸುತ್ತಿದ್ದಾಳೆ. ಈ ೮೦–೯೦ ಸಾವಿರ ಹುಳುಗಳಲ್ಲಿ ಅರುವತ್ತು, ಎಪ್ಪತ್ತು ಸಾವಿರ ಹುಳುಗಳು ಅಲಕಾವತಿಗೆ ಸಮಾನವಾದ ಈ ನಗರವನ್ನು ಗೊತ್ತಾದ ಕಾಲಕ್ಕೆ ಸರಿಯಾಗಿ ತೊರೆದು ಎಲ್ಲಿಗೊ ಹೋಗುತ್ತವೆ. ಮತ್ತೆ ಇಲ್ಲಿಗೆ ಬರುವುದಿಲ್ಲ. ಈ ಬಗೆಯ ತ್ಯಾಗವನ್ನು ತನ್ನಲ್ಲಿ ಕಂಡು ಅರಿಯದ ಮಾನವನ ಮತಿಗೆ ಇದರ ಅಂತರಾಳ ತಿಳಿಯದು. ಯಾವುದೋ ಒಂದು ಕಾಣದ ಕೈ, ಭವ್ಯಶಕ್ತಿ ಜೇನು ಹುಳುಗಳ ಈ ಅಜೇಯ ತ್ಯಾಗದಲ್ಲಿ ಅಡಗಿದೆ ಎಂದು ಮಾತ್ರ ಹೇಳಬೇಕಷ್ಟೆ. ಭಯಂಕರ ಬರಗಾಲಕ್ಕೆ ಒಲಿಯಾದ, ಕ್ರೂರ ಸಾಂಕ್ರಾಮಿಕ ರೋಗಕ್ಕೆ ತುತ್ತಾದ, ಅಮಾನುಷ ಭೀಕರ ಯುದ್ಧ ಭೀತಿಗೆ ಹೈಡ್ರೋಜನ್, ಆಟಂ ಬಾಂಬುಗಳ ಗುರಿಗೆ ಸಿಕ್ಕ ನಗರದಿಂದ ಓಡುವ

ಮನುಷ್ಯರಂತೆ ಅವು ದಿಕ್ಕುಗೆಟ್ಟು ಓಡುತ್ತಿಲ್ಲ. ಇಂದು ಜೇನು ಹುಳುಗಳ ಗೂಡು ಸಕಲ ಸಂಪತ್ತಿನಿಂದ ಕೂಡಿ ಕುಬೇರನ ಅಲಕಾವತಿಯಂತೆ ಕಂಗೊಳಿಸುತ್ತಿದೆ. ಆದರೆ ಇದು ಭೋಗಿಗಳ ಆಲಕಾವತಿಯಲ್ಲ; ಕರ್ಮಯೋಗಿಗಳ ತ್ಯಾಗಿಗಳ ಆಲಕಾವತಿ—ಅಜೇಯತ್ಯಾಗ—ಇದರ ಕಾಲ ವನ್ನು ಗೊತ್ತುಮಾಡುವವರು ಯಾರು? ಇಷ್ಟು ಹುಳು ಗಳು ಈ ಸಂಪತ್ತಿನ ನಗರವನ್ನು ಬಿಟ್ಟು ನಿಗದಿಯಾದ ಕಾಲಕ್ಕೆ ಸರಿಯಾಗಿ ಹಳೆಯ ರಾಣಿಯೊಡಗೂಡಿ ಹೋಗ ಬೇಕು. ಇಷ್ಟು ಹುಳುಗಳು (ಸೈನಿಕರು, ಸಿಪಾಯಿಗಳು, ಕೆಲಸಗಾರರು ದಾದಿಯರು....) ನಗರದಲ್ಲೇ ನಿಂತು ಅದರಲ್ಲಿರುವ ಸಂಪತ್ತನ್ನು ರಕ್ಷಿಸಿ; ಮರಿಗಳನ್ನು ಕಾಪಾಡಿ ಜನಾಂಗವನ್ನು ಉದ್ಧಾರ ಮಾಡಬೇಕೆಂದು ಗೊತ್ತು ಮಾಡುವವರು ಯಾರು? ರಾಣಿ ಜೇನೆ?....ನಾವು ಅರಿಯಲಾರದ ಶಕ್ತಿ "ಬಳಗದ ಶಕ್ತಿ" ಎಂದು ಕರಿ ಯೋಣ. ಈ ಬಳಗದ ಶಕ್ತಿಯ ಆಜ್ಞೆಯಂತೆ ಕೆಲವು ಸಾವಿರ ಜೇನು ಹುಳುಗಳು ಈ ನಗರವನ್ನು ಬಿಟ್ಟು ಎತ್ತಲೊ ಹೋಗುತ್ತವೆ. ಕೆಲವು ಪ್ರಾಯದ ಹುಳುಗಳು ಹೊನ್ನ ಹೊಚ್ಚಿಗೆಯಲ್ಲಿ ಮಲಗಿರುವ ಮರಿಗಳನ್ನೂ, ರಾಜಕುವರಿಯರನ್ನೂ ಕಾಪಾಡಲೂ ಮತ್ತು ಸರ್ವಾಂಗ ಸಮೃದ್ಧಿಯಾದ ನಗರವನ್ನು ರಕ್ಷಿಸಲು ಹಿಂದುಳಿಯು ತ್ತವೆ. ಈ ನಿದ್ರಿಸುವ ನಗರದಲ್ಲಿ ಕೆಲವು ಗಂಡು ಜೇನುಗಳೂ ನಿಲ್ಲುತ್ತವೆ. ಈ ಗಂಡು ಜೇನುಗಳಲ್ಲಿ

ಒಂದು ಭಾವಿ ರಾಣಿಯು ಪ್ರೇಮಿಯಾಗಬಹುದು. ಗೂಡಿನಲ್ಲೆ ನಿಲ್ಲ ಬೇಕೆಂದು ಗೊತ್ತಾದ ಕೆಲಸಗಾತಿಯರು ನಿತ್ಯದಂತೆ ಪುಷ್ಪಪರ್ಯಟನಕ್ಕೆ ಹೋಗಿ ಬರುತ್ತಾರೆ.

ಬಂಡುಂಡು ಬಂದು ಗೂಡು ಸೇರಿದ ಜೇನುಗಳು ತಮಗೆ ರೆಕ್ಕೆಗಳಿರುವುದನ್ನೆ ಮರೆತಂತೆ ಅವುಗಳಿಗೆ ನೇಮಿಸಲ್ಪಟ್ಟ ಕೆಲಸದಲ್ಲಿ ತೊಡಗುತ್ತಿದ್ದವು, ಅವುಗಳ ನಿತ್ಯ ಜೀವನದಲ್ಲಿ. ಆದರೆ ಇಂದು ಏನೋ ಭ್ರಮೆ ಗೊಂಡಂತೆ ಕಾಣುತ್ತಿವೆ. ಗುಂಪು ಗುಂಪಾಗಿ ಗಡಿಬಿಡಿ ಯಿಂದ ಗೂಡಿನ ಸುತ್ತಲೂ ತಿರುಗುತ್ತಿವೆ. ಇವುಗಳ ಬಿಡುವಿಲ್ಲದ ರೆಕ್ಕೆಗಳ ಚಲನೆಯಿಂದ ಗೂಡಿನಲ್ಲಿ ಶಾಖ ಹೆಚ್ಚಾಗಿ ಕೆಲವು ಸಾರಿ ಮೇಣ ಮೆದುವಾಗುತ್ತದೆ. ಗಜಿ ಬಿಜಿ ಶಬ್ದ ಹೆಚ್ಚಿ ಜನ ಜಂಗುಳಿಯಲ್ಲಿ ಆಡುವ ಮಾತು ಗಳ ತಮುಲವನ್ನು ದೂರದಿಂದ ಕೇಳಿದಂತೆ, ಇಂದಿನ ಈ ಜೇನುಹುಳುಗಳ ವಿಚಿತ್ರ ಶಬ್ದದ ಅರ್ಥ ತಿಳಿಯುವುದಿಲ್ಲ —ಇವು ಸಂಪತ್ತಿನ ನಗರವನ್ನು ಬಿಟ್ಟು ಹೋಗುವ ವಿಷಯದಲ್ಲಿ ಚರ್ಚೆ ನಡೆಸುತ್ತಿರಬಹುದು. ಮುಂದಿನ ಕಾರ್ಯಕ್ರಮದ ವಿವರವನ್ನು ಸಂಬಂಧಪಟ್ಟ ಹುಳುಗಳಿ ಗೆಲ್ಲಾ ತಿಳಿಸುತ್ತಿರಬಹುದು. ಅಂತು ಒಂದು ಹಿಂಡು ಈ ಅಲಕಾವತಿಯಿಂದ ಆಗಲಬೇಕು ಎಂದು ತಿರ್ಮಾನ ವೇನೊ ಆಗಿದೆ. ಈ ತೀರ್ಮಾನವನ್ನು ತಮ್ಮ ಗುಂಪಿಗೆಲ್ಲ ತಿಳಿಸುತ್ತವೆ. ಈ ತೀರ್ಮಾನ ಒಂದು ಹುಳುವಿನಿಂದ ಇನ್ನೊಂದಕ್ಕೆ ಹೇಗೆ ತಿಳಿಯುತ್ತದೆ? ಮನುಷ್ಯರಂತೆ

ಅವಕ್ಕೂ ಒಂದು ಭಾಷೆ ಇದೆಯೆ?—ಜೇನು ಹುಳುಗಳು ತಮ್ಮ ರೆಕ್ಕೆ, ಕಾಲು, ಆಘ್ರಾಣ ಶಲಾಕೆಗಳ ಸಂಜ್ಞೆಯಿಂದ, ಬೇರೆ ಬೇರೆ ಬಗೆಯ ನೃತ್ಯಗಳಿಂದ ಮಾತಾಡುತ್ತವೆ—ಒಂದು ಹುಳು ಮತ್ತೊಂದಕ್ಕೆ, ಒಂದು ಗುಂಪು ಇನ್ನೊಂದಕ್ಕೆ ಸುದ್ದಿಯನ್ನು ತಿಳಿಸುತ್ತವೆ. ಹೀಗೆ ಅವು ಹೆಚ್ಚಿಗೆ ಹೂವಿರುವ ಸ್ಥಳಗಳ, ತಮ್ಮ ಹೊಸ ನಗರವನ್ನು ನಿರ್ಮಿಸಲು ಗೊತ್ತುಮಾಡಿದ ನಿವೇಶನದ, ಮಧುಭಂಡಾರ ಇರುವ ಜಾಗಗಳ ವಿವರವನ್ನು ಗುಂಪಿಗೆ ತಿಳಿಸುತ್ತವೆ. ಜೇನುಹುಟ್ಟಿಯಲ್ಲಿ ಹೊಕ್ಕು ಮಕರಂದವನ್ನು ಕದಿಯುವ ಚಿಟ್ಟೆಗಳು ಗೂಡನ್ನು ಪ್ರವೇಶಿಸಿದಾಕ್ಷಣ ಬಾಗಿಲಲ್ಲಿ ತಿರುಗುತ್ತಿರುವ ಕಾವಲ ಸಿಪಾಯಿಗಳು ರೆಕ್ಕೆಗಳನ್ನು ಬಡಿದು ವಿಶಿಷ್ಟ ರೀತಿಯ ಧ್ವನಿಯನ್ನು ಹೊರಡಿಸುತ್ತವೆ. ಮಾನವನ ಪ್ರಪಂಚದಲ್ಲಿ ಶತ್ರು ವಿಮಾನವನ್ನು ಕಂಡು ಎಚ್ಚರಿಕೆ ಕೊಡುವ ಸಿಳ್ಳಿಯಂತೆ (ಸೈರ್‌ನ್) ಈ ಧ್ವನಿ ಜೇನುಗಳ ಹಿಂಡನ್ನು ಎಚ್ಚರಿಸುತ್ತದೆ. ವಿಶಾಲವಾದ ನಗರದ ನಾನಾ ಭಾಗಗಳಲ್ಲಿದ್ದ ಸಿಪಾಯಿಗಳು, ಸೈನಿಕರು ಬಂದು ದಾಳಿಕಾರರ ಮೇಲೆ ನುಗ್ಗಿ ಒಂದು ಕ್ಷಣಮಾತ್ರದಲ್ಲಿ ವಿಜಯಿಗಳಾಗಿ, ನಿಮಿಷಾರ್ಧದಲ್ಲಿ ತಮ್ಮ ತಮ್ಮ ಕೆಲಸಗಳಿಗೆ, ಗೊತ್ತಾದ ಸ್ಥಳಗಳಿಗೆ ಹೋಗುತ್ತವೆ.

"ಸಂಪತ್ತಿನ ನಗರವನ್ನು ತ್ಯಜಿಸಿ, ನಿರ್ದಿಷ್ಟ ಕಾಲಕ್ಕೆ ಹೊರಡಬೇಕು" ಎಂದು ಸುಗ್ರೀವಾಜ್ಞೆ ಹೊರಟಿದೆ.

ಈ ತ್ಯಾಗ ಅರ್ಥ ಹೀನವೆ? ಗೊತ್ತು ಗುರಿ ಇಲ್ಲದ್ದೆ ? ಪ್ರಕೃತಿ ದತ್ತವಾದ ಕೇವಲ ಒಂದು ಭಾವವೇಶದಿಂದ ಆದದ್ದೆ? ಪ್ರಕೃತಿಯ ಕುರುಡು ನಿಯಮಕ್ಕೆ ಬಲಿಯಾಗಿ ಗೊತ್ತುಗುರಿ ಇಲ್ಲದೆ ಎತ್ತಲೊ ಹೊರಟವೆಯೆ?–ಇಲ್ಲ ಈ ಜೇನುಹುಳುಗಳ ಅಜೇಯ ತ್ಯಾಗ ಅವು ತಮ್ಮ ಭಾವಿ ಜನಾಂಗದ ಉದ್ಧಾರಕ್ಕಾಗಿ ಕೈಗೊಂಡ ತ್ಯಾಗ. ಈ ಪವಿತ್ರ ತ್ಯಾಗಕ್ಕಾಗಿ ಇಷ್ಟೊಂದು ಗಡಿಬಿಡಿ ವಿಪುಲ ಸಿದ್ಧತೆ.* ನಗರದಲ್ಲೆ ಉಳಿದು ಅದರ ರಕ್ಷಣೆ ಮರಿಗಳ

---

*ನಾವು ನೋಡುತ್ತಿರುವುದು ತನ್ನ ಜೀವಮಾನದಲ್ಲೆ ಮಾನವನ ಕೈವಾಡವನ್ನು ಕಾಣದಿರುವ ಜೇನುಗೂಡು. ಆದರೆ ಜೇನು ಸಾಕುವ ರೈತನೊಬ್ಬನ ಜೇನುಗೂಡಿನಿಂದ ಇದೇ ರೀತಿ ಹಿಂಡು ಎದ್ದು ಹಾರಿಹೋಗುವ ಸಮಯ ಬಂದಿದೆ. ನಾವು ಕಾಡಿನಲ್ಲಿ ಕಂಡ ಗೂಡಿನಂತೆ ಇಲ್ಲಿಯೂ ವಿಪುಲೈಶ್ವರ್ಯವಿದೆ. ಹಿಂಡು ಹಾರಿ ಹೋಗಲು ಸ್ವರಸಿದ್ಧತೆಯ ಗಡಿಬಿಡಿ ನಡೆಯುತ್ತಿದೆ. ಏಳೆಂಟು ರಾಜಕುಮಾರಿಯರು ರಾಜಮಂದಿರಗಳಲ್ಲಿ ಮಲಗಿದ್ದಾರೆ. ಹಾರಿ ಹೋಗುವ ಹಿಂಡಿನಲ್ಲಿ ದುಡಿಯುವ ಜೇನುಗಳಲ್ಲಿ ಬಹುಭಾಗ ಹೊರಟು ಹೋಗುತ್ತವೆ. ರೈತನು ಈ ದುಡಿಯುವ ಜೇನು ಗಳನ್ನು ಉಳಿಸಿಕೊಳ್ಳಬೇಕು—ಆಗ ರೈತನು ಮಲಗಿರುವ ರಾಜ ಕುವರಿಯೆಲ್ಲರ ಕೊಲೆಮಾಡುತ್ತಾನೆ. ತಾವು ಬಿಟ್ಟು ಹೋಗುವ ಭಾವಿ ಜನಾಂಗದ 'ತಾಯಿ' ರಾಣಿಯೊಬ್ಬಳು ಇಲ್ಲದಂತಾದ ಸುದ್ಧಿ ಮಿಂಚಿನಂತೆ ಹರಡಿ, ನಗರ ತ್ಯಾಗದ ಸಿದ್ಧತೆ ತಕ್ಷಣ ನಿಂತು, ಎಲ್ಲಾ ಜೇನು ಹುಳುಗಳು ತಮ್ಮ ತಮ್ಮ ಕೆಲಸದಲ್ಲಿ ತೊಡಗು ತ್ತವೆ. ರಾಣಿಯಾಗುವ ಉತ್ತರಾಧಿಕಾರಿಯನ್ನು ನೇಮಿಸದೆ ನಗರವನ್ನು ಬಿಟ್ಟು ಹೋದರೆ ಸರ್ವನಾಶವಾಗುವುದೆಂದು

ಪಾಲನೆ ಮಾಡಬೇಕೆಂಬ ಆಜ್ಞಾಧಾರಿಗಳಾದ ಜೇನು ಹುಳುಗಳು ಸುತ್ತ ಇಷ್ಟೊಂದು ಗಡಿಬಿಡಿ ಇದ್ದರು ತಮಗೆ ಏನೂ ತಿಳಿಯದಂತೆ ಪುಷ್ಪಪರಾಗ ತರಲು ಹೋಗಿ ಬರುತ್ತಿವೆ. ದ್ವಾರಪಾಲಕರು, ದಾದಿಯರು ಎಚ್ಚರಿಕೆಯಿಂದ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿದ್ದಾರೆ.

ಜೇನುಗಳ ಗುಂಪು ಹೊರಡುವ ಕಾಲ ಗೊತ್ತಾಗಿದೆ. ಗೊತ್ತಾದ ಈ ವೇಳೆ ಸಮೀಪಿಸುತ್ತಿದೆ. ಕೆಲಸಗಾತಿಯರ ಗುಂಪು ಪ್ರಯಾಣದ ಸಿದ್ಧತೆಯನ್ನು ಮಾಡಿಕೊಳ್ಳುತ್ತಿವೆ. ಪ್ರತಿಯೊಂದು ಕೆಲಸಗಾತಿ ಹುಳುವು ೫-೬ ದಿನಗಳಿಗೆ ಸಾಕಾಗುವಷ್ಟು ಜೇನುತುಪ್ಪವನ್ನು ತನ್ನಲ್ಲಿ ಶೇಖರಿಸಿ ಇಟ್ಟುಕೊಳ್ಳುತ್ತದೆ. ಕೆಲಸಗಾತಿಯರು ಈ ಮಧುರ ಮಕರಂದದಿಂದ ತಮ್ಮ ಹೊಸ ನಗರದ ಅಸ್ಥಿಭಾರಕ್ಕೆ ಬೇಕಾದ ಮೇಣವನ್ನು ತಯಾರಿಸುತ್ತಾರೆ. ಈ ಮೇಣದ ತಯಾರಿಕೆಯ ಗುಟ್ಟು ತಿಳಿದಿರುವುದು ಈ ರಸಾಯನ ಶಾಸ್ತ್ರಜ್ಞರಿಗೆ ಮಾತ್ರ. ತಮ್ಮ ಅವಸರದ ಕೆಲಸಗಳಿಗೆ ಬೇಕಾದಷ್ಟು ಪುಷ್ಪಪರಾಗವನ್ನೂ ಮತ್ತು ಹೊಸ ನಗರವನ್ನು ಕಟ್ಟುವ ನಿವೇಶನದಲ್ಲಿ ಇರ

---

ಜೇನು ಹಿಂಡುಗಳಿಗೆ ಗೊತ್ತು. ಜನಾಂಗದ ಅಭಿವೃದ್ಧಿಗಾಗಿಯೇ ದುಡಿಯುವ ಈ ಜೀವಿಗಳು ನಗರವನ್ನು ತ್ಯಾಗ ಮಾಡುವ ಸಿದ್ಧತೆಯನ್ನು ಬಿಟ್ಟು ನಗರದಲ್ಲೇ ನಿಂತು ಮತ್ತೊಮ್ಮೆ ಉತ್ತರಾಧಿಕಾರಿಯನ್ನು ನೇಮಿಸಿ ಹೋಗಲು ಪ್ರಯತ್ನಿಸುತ್ತವೆ—ಈ ತ್ಯಾಗ —ಅರ್ಥವಿಲ್ಲದ್ದೆ ?

ಬಹುದಾದ ಬಿರಕುಗಳನ್ನು ಮುಚ್ಚಲು, ಅದರ ಜಾಗ ಗಳನ್ನು ಬಲಪಡಿಸಲು, ಹೊಳಪು ಕೊಡಲು ಒಂದು ಬಗೆಯ "ಜೇನು ಅಂಟನ್ನು" ತೆಗೆದುಕೊಳ್ಳುತ್ತವೆ. ಈ ಹುಳುಗಳ ಗುಂಪು ನಗರವನ್ನು ಬಿಟ್ಟು ಹೊರಟ ನಂತರ ಮರಳಿ ಇಲ್ಲಿಗೆ ಬರುವುದಿಲ್ಲ. ಈ ಗುಂಪಿಗೆ ದಾರಿ ಯಲ್ಲಿ ಯಾರ ಸಹಾಯವೂ ದೊರೆಯುವುದಿಲ್ಲ. ಹೊಸ ನಗರ ನಿರ್ಮಾಣ ಕಾಲದಲ್ಲಿ ಕೆಲವುಕಾಲ ಪುಷ್ಪಪರಾಗ ಲೀಲೆಗೆ ಹೋಗುವಂತಿಲ್ಲ. ಆದ್ದರಿಂದ ಎಚ್ಚರಿಕೆಯ ಈ ಸಿದ್ಧತೆ. ಇಂದು ಒಂದೇ ದಿನ ಜೇನುಗಳು ತಾವು ಕೂಡಿಟ್ಟ ಮಕರಂದವನ್ನು ತೃಪ್ತಿಯಾಗುವವರೆಗೂ ಕುಡಿಯುವುವು. ಅವುಗಳ ಜೀವನದಲ್ಲಿ ದುಡಿಮೆ ಕಾಣದ ದಿನ ಇದು ಒಂದೇ—ತ್ಯಾಗದ ದಿನ. ಎಲ್ಲ ಜೇನು ಹುಳುಗಳು ಹೊರಡಲು ಸಿದ್ಧವಾಗಿ ಅತ್ತಿತ್ತ ಓಡಾಡು ತ್ತಿವೆ. ಸಂತೋಷದಿಂದ ಎತ್ತರಕ್ಕೆ ಹಾರಿ ಹಿಂತಿರುಗಿ ಬಂದು ತಮ್ಮ ಜೊತೆಗಾರರನ್ನು ಎಚ್ಚರಿಸುತ್ತಿವೆ. ಸದಾ ನಗರ ಮಧ್ಯದಲ್ಲೇ ಸುಳಿಯುತ್ತಿದ್ದ, ತನ್ನ ಪರಿಣಯ ಪರ್ಯಟಣದ ನಂತರ ಸೂರ್ಯಪ್ರಕಾಶವನ್ನೆ ಕಾಣದಿದ್ದ ಅಹೋರಾತ್ರಿ ಮೊಟ್ಟೆ ಇಡುವುದರಲ್ಲೇ ನಿರತಳಾಗಿದ್ದ ರಾಣಿ ಅವಸರದಿಂದ, ಭಾವಾವೇಶದಿಂದ ಗೂಡಿನಿಂದ ಹೊರಗೆ ಬರುತ್ತಾಳೆ. ಹೊರಡಲು ಸಿದ್ಧವಾದ ಜೇನು ಗಳು ರಾಣಿಯ ಸುತ್ತ ಮುತ್ತುತ್ತವೆ. ನಿಯತ ಕಾಲಕ್ಕೆ ಸರಿಯಾಗಿ ಹಿಂಡು ಹಾರಬೇಕೆಂದು ಆಜ್ಞೆಯಾಗುತ್ತದೆ.

ರಾಣಿಯನ್ನು ಹಿಂಬಾಲಿಸಿ ಕೆಲಸಗಾತಿಯರು ಹಾರುತ್ತಾರೆ. ಈ ಹಿಂಡು ಸಂತೋಷ ಸಾಗರದಲ್ಲಿ ತೇಲುತ್ತಾ ಬಂದು ರಾಣಿ ಜೇನು ಇಳಿದ ಒಂದು ಮರದ ಮೇಲೆ ಇಲ್ಲವೆ ಪೊದೆಯಲ್ಲಿ ಮೊದಲಿನಂತೆ ಗುಂಪು ಸೇರುತ್ತದೆ. ಪುನಃ ಶಾಂತಿ ನೆಲೆಸುತ್ತದೆ, ಹಿರಿಯ ರಾಣಿಯನ್ನು ಕೂಡಿ ಬಂದ ಈ ಗುಂಪು ಹೊಸ ನಗರ ನಿವೇಶನವನ್ನು ಗೊತ್ತುಮಾಡಿಕೊಂಡು ಬರಲು ಹೋದ "ಮುಂದಳ ಗುಂಪು"ಗಳಿಗಾಗಿ ಕಾಯುತ್ತಿದೆ.

ಈ ಗುಂಪು ತಾವು ತ್ಯಜಿಸಿ ಬಂದ ಸಿರಿ ನಗರದ ಸಮೀಪದಲಿಯೇ ಬೀಡುಬಿಡುತ್ತವೆ. ಕೆಲವಾರು ತಿಂಗಳಿಂದ ರೆಕ್ಕೆಗಳನ್ನು ಉಪಯೋಗಿಸದೆ ಇದ್ದ ಮತ್ತು ಸೂರ್ಯಪ್ರಕಾಶವನ್ನು ಕಾಣದೆ ಇದ್ದ ಮೊಟ್ಟೆಗಳ ಭಾರ ಹೊತ್ತ ರಾಣಿ ಒಮ್ಮೆಗೆ ಬಹುದೂರಕ್ಕೆ ಹಾರುವ ಸಾಹಸವನ್ನು ಮಾಡುವುದಿಲ್ಲವೆಂದು ಕಾಣುತ್ತದೆ, ಅಲ್ಲದೆ ಮುಂದಳ ಗುಂಪಿನವರಿಗಾಗಿ ಕಾಯಬೇಕು. ಆದುದರಿಂದ ಸಮೀಪದ ಪೊದೆಯಲ್ಲಿ ಬೀಡುಬಿಡುತ್ತವೆ. ಇಂದು ಈ ಗುಂಪಿಗೆ ಬಿಡುವಿನ ದಿನ ತಾವು ರಕ್ಷಿಸಬೇಕೆಂಬ ಸಂಪತ್ತಿನ ಹೊರೆ ಇಲ್ಲ. ಆದ್ದರಿಂದ ಶತ್ರುಗಳ ಹೆದರಿಕೆ ಇಲ್ಲ.— ತಮ್ಮ ಗೂಡ ಬಳಿ ಬಂದವರನ್ನು ಎದರಿಸುವ ಛಲವಿಲ್ಲ. ಜೇನು ಸಾಕುವವನು ಈ ಗುಂಪನ್ನು ಸುಲಭವಾಗಿ ಹಿಡಿಯಬಹುದು.

ಹೊಸ ನಗರ ನಿವೇಶನವನ್ನು ಹುಡುಕಲು ಹೊರಟ ಮುಂದಳದವರು (Scouts) ಹಿಂತಿರುಗುವವರೆಗೂ ಈ ತ್ಯಾಗಿಗಳ ಗುಂಪು ಇಲ್ಲೆ ಇರುತ್ತದೆ. ದಿಕ್ಕು ದಿಕ್ಕುಗಳಿಗೆ ಹೋದ ಮುಂದಳ ಗುಂಪಿನವರು ಒಬ್ಬೊಬ್ಬರಾಗಿ ಹಿಂತಿರುಗಿ ತ್ಯಾಗಿಗಳ ಬಿಡಾರವನ್ನು ಸೇರಿ ಈ ನಿಯೋಗಿಗಳು ಮಾಡಿಕೊಂಡು ಬಂದ ಕೆಲಸಗಳ ವಿವರಗಳನ್ನು ತಿಳಿಸುತ್ತವೆ. ಎಲ್ಲಾ ನಿಯೋಗಗಳ ವಿವರಗಳನ್ನೂ ಗುಂಪು ಕೂಲಂಕಷವಾಗಿ ಚರ್ಚಿಸುತ್ತದೆ ಎಂದು ಕಾಣುತ್ತದೆ. ಒಂದು ನಿಯೋಗದವರುಗಾವುದ ದೂರದಲ್ಲಿರುವ ಒಂದು ಹೆಮ್ಮರವನ್ನೇ ಹೇಳಬಹುದು, ಮತ್ತೊಂದು ನಿಯೋಗ ಮಾನವ ನಿರ್ಮಿತ ಕಟ್ಟಡವನ್ನೂ ಇನ್ನೊಂದು ನಿಯೋಗ ನದಿಯೊಂದರ ಪಾತ್ರಕ್ಕೆ ನೆರಳಾಗಿ ಚಾಚಿರುವ ಕೋಡು ಬಂಡೆಯನ್ನೂ ಹೇಳಬಹುದು. ಹೀಗೆ ಹಲವಾರು ಸಲಹೆಗಳು. ಈ ಸಭೆಯು ಒಂದು ತೀರ್ಮಾನಕ್ಕೆ ಬರಲು ಆ ದಿನವೆಲ್ಲಾ ಕಳೆಯಬಹುದು. ಅಂತು ಸರ್ವಾನುಮತದ ಒಂದು ತೀರ್ಮಾನವಾಗುತ್ತದೆ. ಮರುದಿನ ಗೊತ್ತಾದ ಕಾಲಕ್ಕೆ ಹಿಂಡು ಹಾರುತ್ತದೆ. ರಾಣಿಯೊಡಗೂಡಿ ಕಾಡು, ಮೇಡು, ಹಳ್ಳಿ ನಗರ ಹೊಲಗದ್ದೆ ನದಿಹಳ್ಳಗಳ ಮೇಲೆ ಹಾರಿ ಸಾಮಾನ್ಯವಾಗಿ ದೂರದ ಮೂದಲೆ ಗೊತ್ತಾದ ಹೊಸ ನಗರ ನಿವೇಶನವನ್ನು ಸೇರುತ್ತವೆ.

# ರಾಣಿ

ರಾಣಿ ಜೇನು ಹಿಂಡಿನ ಜೀವ. ಇತರ ಜೇನುಗಳು ರಾಣಿಜೇನಿಗಾಗಿ ಸರ್ವತ್ಯಾಗ ಮಾಡುತ್ತವೆ. ರಾಣಿ ಜೇನು ಕರ್ಮಯೋಗಿ ಕೆಲಸಗಾರ ಜೇನುಗಳ ಪ್ರೇಮ ಪುತ್ಥಳಿ—ಗುಂಪಿನಲ್ಲಿ ಸರ್ವಶ್ರೇಷ್ಠಳೂ, ಪವಿತ್ರಳೂ ಆದ ರಾಣಿಗೆ ಎಲ್ಲ ಜೇನುಗಳು ಗೌರವವನ್ನು ಕೊಡುತ್ತವೆ. ರಾಣಿ ಇಲ್ಲದ ಜೇನು ಹಿಂಡು ಬದುಕಲಾರದು. ಅಹೋರಾತ್ರಿ ರಾಣಿಯ ಸುತ್ತ ಮೈಗಾವಲಿನವರು ತಿರುಗುತ್ತಾರೆ. ರಾಣಿ "ತಾಯ" ಕರ್ತವ್ಯವನ್ನು ನಿರ್ವಹಿಸಲು ಅನುಕೂಲವಾಗುವಂತೆ ಮೊಟ್ಟೆ ಇಡಲು ಗೂಡುಗಳನ್ನು ಕೆಲಸಗಾತಿ ಜೇನುಗಳು ಬಿಡುವಿಲ್ಲದೆ ಕಟ್ಟಿಕೊಡುತ್ತವೆ. ಪ್ರೀತಿ, ವಿಶ್ವಾಸದಿಂದ ರಾಣಿಯನ್ನು ಉಪಚರಿಸಲು ದಾದಿಯರು ಸದಾ ರಾಣಿಯ ಸಂಗಡ ಇರುತ್ತಾರೆ. ರಾಣಿಗಾಗಿ ತಾವು ತಯಾರಿಸಿದ ವಿಶೇಷ ರೀತಿಯ ಜೇನುತುಪ್ಪವನ್ನು (ರಾಜರಸ) ಆ ದಾದಿಯರು ರಾಣಿಗೆ ಉಣಬಡಿಸುತ್ತಾರೆ. ಈ ರಾಜನ್ನವನ್ನು ಸಾಮಾನ್ಯವಾಗಿ ರಾಣಿಯಲ್ಲದೆ ಇತರರು ಸೇವಿಸುವುದಿಲ್ಲ. ದಾದಿಯರು ಎಚ್ಚರಿಕೆಯಿಂದ ರಾಣಿಯನ್ನು ಶುಚಿಗೊಳಿಸುತ್ತಾರೆ. ರಾಣಿ ಜೇನು ವಿಸರ್ಜಿಸಿದ ಕೊಳಕನ್ನು ತೆಗೆದು ರಾಜಮಂದಿರವನ್ನೂ, ನಗರವನ್ನೂ ನಿರ್ಮಲವಾಗಿಡುತ್ತಾರೆ. ಅಕಸ್ಮಾತ್ ರಾಣಿಗೆ ಏನಾದರೂ

ಅಪಘಾತ ಸಂಭವಿಸಿದಾಕ್ಷಣ ಈ ಸುದ್ದಿ ಗುಂಪಿನಿಂದ ಗುಂಪಿಗೆ ಮಿಂಚಿನ ವೇಗದಲ್ಲಿ ಹರಡಿ, ದುಃಖದ ಹುಯಿಲು ಬಿರುಗಾಳಿಯಂತೆ ನಗರದಲ್ಲೆಲ್ಲಾ ಹಬ್ಬುತ್ತದೆ. ಎಲ್ಲಾ ಜೇನುಹುಳುಗಳು ಕರ್ತವ್ಯಪರಾಙ್ಮುಖವಾಗಿ ರಾಣಿಯತ್ತ ಓಡುತ್ತವೆ. ಅಪಘಾತಕ್ಕೊಳಗಾದ ರಾಣಿ ಕ್ಷಣಾರ್ಧದಲ್ಲಿ ಪ್ರೀತಿ ವಿಶ್ವಾಸದ ತನ್ನ ಬಳಗದವರ ಬಂದಿಯಾಗುತ್ತಾಳೆ. ರಾಣಿಯ ಸ್ಥಾನಕ್ಕೆ ಉತ್ತರಾಧಿಕಾರಿಗಳಿಲ್ಲದಾಗ ಹೀಗೆ ಅಪಘಾತಕ್ಕೆ ಸಿಕ್ಕ ರಾಣಿಜೇನು ಇಹಲೋಕವನ್ನು ತ್ಯಜಿಸಿದರೆ ಹುಯಿಲ ಹೊನಲು ಈ ಸುಂದರ ನಗರವನ್ನು ಕೊಚ್ಚಿ ಹಾಳುಮಾಡುತ್ತದೆ.* ರಾಣಿಯ ಸಾವಿನ ಸುದ್ದಿ ಎರಡು, ಮೂರು ಘಂಟೆಗಳಲ್ಲಿ ಈ ವಿಶಾಲ ನಗರದಲ್ಲೆಲ್ಲಾ ಹರಡುತ್ತದೆ. ತಕ್ಷಣ ಎಲ್ಲೆಡೆಯೂ ಕೆಲಸ ನಿಲ್ಲುತ್ತದೆ. ದುಃಖ ಹುಚ್ಚೆದ್ದು ಕುಣಿಯುತ್ತದೆ. ಬಂಗಾರದ ತೊಟ್ಟಿಲುಗಳಲ್ಲಿ ಮಲಗಿರುವ ಸಾವಿರಾರು ಮಕ್ಕಳನ್ನು ಆದರಿಸುವವರು ಇಲ್ಲ. ಕೆಲಸಗಾತಿಯರು ಪುಷ್ಪಪರಾಗಕ್ರೀಡೆಯನ್ನು ಮರೆಯುತ್ತಾರೆ. ದಿಕ್ಕು ಕಾಣದೆ ಅತ್ತಿತ್ತ ಓಡುತ್ತಾರೆ. ಶಿಸ್ತಿನ ನಗರ

---

[* ಉತ್ತರಾಧಿಕಾರಿಗಳು ಎಂದರೆ ರಾಜಕುವರಿಯರು; ರಾಜಕುವರಿಯರಿಲ್ಲದಾಗ ಮೂರು ದಿನಗಳಿಗಿಂತ ಕಡಮೆ ವಯಸ್ಸಿನ ಮರಿಗಳಿದ್ದರೆ ಅವನ್ನು ರಾಣಿಯನ್ನಾಗಿ ಪರಿವರ್ತಿಸುತ್ತವೆ. ಇವೆರಡೂ ಇಲ್ಲದಾಗ ಉತ್ತರಾಧಿಕಾರಿ ಇಲ್ಲದಂತಾಗುತ್ತದೆ.]

ದಲ್ಲಿ ಹುಚ್ಚುರಚ್ಚೆದ್ದು ಕುಣಿಯುತ್ತದೆ. ಭಂಡಾರ ಗಳಲ್ಲಿರುವ ಬಡುಂಡು ಹೋಗುವ ಪರೋಪಜೀವಿಗಳನ್ನೂ ಭಂಡಾರವನ್ನು ದೋಚಿಕೊಂಡು ಹೋಗುವ ಬಂಡುಗಾರ ರನ್ನೂ ಸದೆಬಡಿಯುತ್ತಿದ್ದ ಕಾವಲುಗಾರರು ಕಾರ್ಯ ವಿಮುಖರಾಗುತ್ತಾರೆ. ಪರತಂತ್ರ ಜೀವಿಗಳು ಭಂಡಾರ ವನ್ನು ಸೂರೆಗೊಳ್ಳುತ್ತವೆ. ದರಿದ್ರಲಕ್ಷ್ಮಿ ಈ ಸಿರಿ ನಗರಕ್ಕೆ ಕಾಲಿಡುತ್ತಾಳೆ. ಸುತ್ತ ಚೈತ್ರ ಕನ್ನೆಯರು ಹೂವಿನ ಚಂಡಾಟವಾಡುತ್ತಿದ್ದರೂ ಈ ಜೇನುಹುಳು ಗಳು ಹಸಿವು ದುಃಖ ನಿರಾಸೆಯಲ್ಲಿ ನರಳಿ ಮಡಿಯುತ್ತವೆ. ಇದು ರಾಣಿಗಾಗಿ.

ರಾಣಿಯ ಚಿಂತಾಜನಕ ಸ್ಥಿತಿ ಇಲ್ಲವೆ ಕಣ್ಮರೆ ಅಸದಳ ದುಃಖವನ್ನು ನಗರದಲ್ಲಿ ಬೀರುವ ಮೊದಲು ಗೆಲುವಿನ ರಾಣಿಜೇನು ಗುಂಪಿನಲ್ಲಿ ಸೇರಿತೆನ್ನಿ—(ಬಹಳ ಕಾಲದ ತುಂಬುದುಃಖ ಜೇನುಗಳ ಬುದ್ಧಿಯನ್ನು ನಾಶಮಾಡು ತ್ತದೆ. ಆಗ ರಾಣಿ ಮರಳಿದರೂ ನಗರದ ಶಿಸ್ತು ಮರಳು ವುದಿಲ್ಲ. ಇದು ಮಾನವನಿಗೂ ಸಹಜ.) ರಾಣಿಯನ್ನು ನೋಡುವ ಹೆಬ್ಬಯಕೆಯಿಂದ ಜೇನುಹುಳುಗಳು ಒಂದರ ಮೇಲೊಂದು ಹತ್ತಿ ರಾಣಿಯತ್ತ ನುಗ್ಗುತ್ತವೆ. ರಾಣಿ ಗುಂಪಿನ ನಡುವೆ ಗಂಭೀರವಾಗಿ ನಡೆಯುವಾಗ ಅಕ್ಕ ಪಕ್ಕದ ಹುಳುಗಳು ತಮ್ಮ ಆಘ್ರಾಣ ಶಲಾಕೆಗಳಿಂದ ಅಪ್ಪಿಮುದ್ದಿಸಿ ಕುಣಿದಾಡುತ್ತವೆ. ದಾದಿಯರು ರಾಜ ರಸವನ್ನು ಉಣಿಸಿ ಉಪಚರಿಸುತ್ತಾರೆ. ಮೈಗಾವಲು

ಸೈನಿಕರು, ದಾದಿಯರು, ಇತರ ಕೆಲಸಗಾತಿಯರ
ಸಂತಸದ ಸರಗೈಯುತ್ತ ರಾಣಿಯನ್ನು ರಾಜಮಂದಿರಕ್ಕೆ
ಕರೆದುಕೊಂಡುಹೋಗಿ ಸೇರಿಸುತ್ತಾರೆ. ರಾಣಿಯು
ಮರಳಿದ ಸಂತಸದ ಸುದ್ದಿ ಹರಡಿದಂತೆ ನಗರದಲ್ಲಿ ಶಿಸ್ತು
ರಾಜ್ಯವಾಳುವುದು. ಎಲ್ಲ ಹುಳುಗಳು ತಮ್ಮ ತಮ್ಮ
ಕೆಲಸಗಳಿಗೆ ಹಿಂದಿರುಗುತ್ತವೆ. ಕೆಲಸಗಾತಿಯರ ಕಪ್ಪು
ಹೊಸಲು ಹೂ ಹೊಲಗಳಿಗೆ ಹೋಗಿಬರುತ್ತದೆ. ಇಷ್ಟ
ರಲ್ಲೇ ಪರತಂತ್ರ ಜೀವಿಗಳು, ಜೇನು ಕದಿಯುವ ಹುಳು
ಗಳು ಗೂಡಿನಲ್ಲಿ ಸೇರಿದ್ದರೆ ಸೈನಿಕ ಜೇನುಗಳು ಅತ್ತ
ಧಾವಿಸಿ ಅವುಗಳನ್ನು ಕೊಂದು ಹೊರಚೆಲ್ಲುತ್ತವೆ, ಇಲ್ಲವೆ
ಸದೆಬಡಿದೋಡಿಸುತ್ತವೆ. ರಾಣಿ ಜೇನುಹುಳುಗಳ ಬಾಳ
ಸೂತ್ರವಲ್ಲವೆ?

ಕೆಲಸಗಾರ ಜೇನು ಹುಳುಗಳು ತಮ್ಮ ಜೀವನದಲ್ಲಿ
ರಾಣಿಜೇನಿನೊಡನೆ ಹೊಂದಿರುವ ನಿಕಟ ಸಂಬಂಧ
ಮತ್ತು ರಾಣಿಗಾಗಿ ಅವುಗಳ ಆತ್ಮಾರ್ಪಣೆ ಅವುಗಳ
ಜೀವನದ ನಾನಾ ಚಟುವಟಿಕೆಗಳಲ್ಲಿ ಪ್ರಕಟವಾಗುತ್ತದೆ.
ಜೇನುಹುಳುಗಳ ಚಿಕ್ಕ ಸುಂದರ ಸುವ್ಯವಸ್ಥಿತ ಪ್ರಜಾ
ಪ್ರಭುತ್ವ ರಾಷ್ಟ್ರಕ್ಕೆ ಮಹಾವಿಪತ್ತೊಂದು ಬಂದೊದಗಿ
ದಾಗ, ಅನಾಹುತಕ್ಕೊಳಗಾದ ಜೇನುಗೂಡು ಮುರಿದು
ಬಿದ್ದಾಗ ಇಲ್ಲವೆ ಮಾರಕರೋಗ ಬಂದಾಗ ಸಾವಿರಾರು
ಕೆಲಸಗಾತಿಯರು ಸಾವಿಗೆ ತುತ್ತಾಗುತ್ತಾರೆ. ಸಾವು
ತಾಂಡವವಾಡುತ್ತಿದ್ದರೂ ರಾಣಿ ಜೇನಿಗೆ ಅಪಾಯವಾಗ

ದಂತೆ ನೋಡಿಕೊಳ್ಳುತ್ತವೆ. ಕೊನೆಯ ಹನಿ ಜೇನು ರಾಣಿಗೆ ಮೀಸಲು, ಕೇವಲ ನೂರಾರು ಹುಳುಗಳು ಉಳಿಯುವ ವರೆಗೂ ಹೆಣಗಳ ಬಣವೆ ಹಬ್ಬಿದರೂ ರಾಣಿ ಜೇನು ಸುಖವಾಗಿರುವಂತೆ ನೋಡಿಕೊಳ್ಳುತ್ತವೆ. ಉಳಿದಿರುವ ಜೇನುಗಳೆ ಅವಸರದ ಬಹುಮುಖ್ಯ ಕಾರ್ಯಗಳನ್ನು ವ್ಯವಸ್ಥಿತವಾಗಿ ಮಾಡುವಂತೆ ಹೊಸ ಏರ್ಪಾಡನ್ನು ಮಾಡಿಕೊಂಡು ರಾಣಿಯನ್ನು ಕಾಪಾಡುತ್ತವೆ. ರಾಣಿ ಜೀವದಿಂದಿರುವವರೆಗೂ ಆಶಾವಾದಿಗಳಾಗಿ ಬಳಗದ ಏಳಿಗೆಗಾಗಿ ದುಡಿಯುತ್ತವೆ. ರಾಣಿಗಾಗಿ ಸರ್ವತ್ಯಾಗ ಮಾಡುತ್ತವೆ.

ರಾಣಿಜೇನಿನ ಮೇಲೆ ಕೆಲಸಗಾತಿಯರಿಗಿರುವ ಪ್ರೀತಿ ಆದರಗಳ ವಿಷಯದಲ್ಲಿ ನಮ್ಮ ಊಹೆ ಏನೇ ಇರಲಿ ರಾಣಿಗಿಂತ ಅವಳು ಪ್ರತಿನಿಧಿಸುವ ಭಾವಿಜನಾಂಗದ ಮೇಲೆ ಪ್ರೀತಿ ಹೆಚ್ಚು. ಜೇನುಹುಳುಗಳು ಕೇವಲ ಸಂಪ್ರದಾಯ ಬದ್ಧವಾಗಿ ಗುಂಪಿಗಾಗಿ, ಗುಂಪಿನವರಿಗಾಗಿ ದುಡಿಯುತ್ತವೆ ಎನ್ನಲಾಗುವುದಿಲ್ಲ. ಮಕರಂದವನ್ನು ತರಲು ಹೊರಗೆ ಹೋದ ಕೆಲವು ಕೆಲಸಗಾತಿ ಜೇನುಗಳು ತಮ್ಮ ಜೀವಮಾನದಲಿ ಕೆಲಸ ಮಾಡಲು ಸಾಧ್ಯವಿಲ್ಲದಂತೆ ಗಾಯಗೊಂಡು ಹಿಂತಿರುಗಿದರೆ ಮನೆಯ ಜೇನುಗಳು ಅವುಗಳನ್ನು ನಿಷ್ಕರುಣೆಯಿಂದ ಹೊರಗೆ ಹಾಕುತ್ತವೆ. ಆದರೆ ರಾಣಿ ಬಹಳ ಮುದಿಯಾಗಿ, ಅಂಗವಿಕಲವಾಗಿದ್ದರೂ, ಒಂದೇ ರೀತಿಯ ಪ್ರೀತಿ ಗೌರವಗಳಿಂದ ಕಾಣು

ತ್ತವೆ. ಹಳೆಯ ರಾಣಿ ಬರಡಾದನಂತರ ಅವಳ ಉತ್ತ ರಾಧಿಕಾರಿಗಳಾಗಲು ರಾಜಕುಮಾರಿಯನ್ನು ಬೆಳೆಸು ತ್ತವೆ. ಪ್ರಾಯದ ರಾಜಕುಮಾರಿ ಹೊರಬಂದಾಕ್ಷಣ ಗೂಡಿನಲ್ಲಿರುವ ಹಳೆಯ ರಾಣಿಯ ಮೇಲೆ ಬಿದ್ದು ಅವಳನ್ನು ಕೊಲೆಮಾಡಲೆತ್ನಿಸುತ್ತಾಳೆ. ಆದರೆ ಕೆಲಸ ಗಾತಿಯರು ಬರಡಾದ ರಾಣಿಯ ಕೊಲೆ ಆಗಗೊಡುವು ದಿಲ್ಲ. ಎರಡು ರಾಣಿ ಜೇನುಗಳು ಒಂದು ಗೂಡಿನಲ್ಲಿ ಸೇರಿದರೆ ಒಂದರ ಮೇಲೊಂದು ಕತ್ತಿಮಸಿಯುತ್ತವೆ. ಇದು ಹೆಣ್ಣು ಜೀವಕ್ಕೆ ಹಿತವಿರಬೇಕು! ಕೆಲಸಗಾತಿಯರು ಹೊಸ ರಾಣಿಯನ್ನು ತಡೆಗಟ್ಟಿ ಮುದಿರಾಣಿಯನ್ನು ಸೆರೆ ಹಿಡಿದು ನಗರದ ಒಂದು ಮೂಲೆಯಲ್ಲಿಟ್ಟು ಹೊಸ ರಾಣಿಗೆ ನಗರ ಮಧ್ಯದ ರಾಜನಿವಾಸವನ್ನು ಬಿಟ್ಟುಕೊಡುತ್ತವೆ ಮತ್ತು ಹಾರಲು ಶಕ್ತಿಯಿಲ್ಲದ ಮುದಿರಾಣಿ ಶಾಂತಿಯಿಂದ ತನ್ನ ಉಳಿದ ಬಾಳನ್ನು ಕಳೆಯಲು ಅನುಕೂಲಮಾಡಿ ಕೊಡುತ್ತವೆ.

ನಾವು ಒಂದು ಬೇರೆ ರಾಣಿಯನ್ನು ತಂದು ಬಲವಂತ ದಿಂದ ಗೂಡಿನೊಳಗೆ ಸೇರಿಸಿದರೆ ಏನು ಮಾಡುತ್ತವೆ? ಪ್ರಕೃತಿಯಲ್ಲಿ ಈ ರೀತಿಯ ಅತಿಕ್ರಮ ಪ್ರವೇಶ ನಡೆ ಯುವುದಿಲ್ಲ.—ಕೆಲಸಗಾತಿಯರು ತಮ್ಮ ವಿಷಪೂರಿತ ಮುಳ್ಳುಗಳಿಂದ ಈ ಹೊಸ ರಾಣಿಯನ್ನು ತಿವಿದು ಕೊಂದು ಹೊರಚೆಲ್ಲಬಹುದು. ಆದರೆ ರಾಣಿಗೆ ಎದುರಾಗಿ ತಮ್ಮ ಆಯುಧವನ್ನು ಹೊರತೆಗೆಯುವುದಿಲ್ಲ. ರಾಣಿ ಜೇನು ಸಹ

ಬಾಗಿದ ಕತ್ತಿಯಂತಿರುವ ತನ್ನ ಅಸ್ತ್ರವನ್ನು ಮಾನವನ ಮೇಲಾಗಲೀ, ಪ್ರಾಣಿಗಳ ಮೇಲಾಗಲೀ, ಇತರ ಜೇನುಗಳ ಮೇಲಾಗಲೀ ಪ್ರಯೋಗಿಸುವುದಿಲ್ಲ. ತನ್ನ ಸರಿಸಮಾನರೊಡನೆ ಎಂದರೆ ಬೇರೆಯ ರಾಣಿಯೊಡನೆ ಹೋರಾಡುವಾಗ ಮಾತ್ರ ಈ ಆಯುಧವನ್ನು ರಾಣಿ ಜೇನು ಹೊರಗೆಳೆಯುತ್ತದೆ. ರಾಣಿಯಲ್ಲದೆ ಬೇರೆ ಯಾವ ಜೇನುಹುಳುಗಳು ರಕ್ತಮಯ ರಾಜಕೊಲೆಗೆ ಧೈರ್ಯ ಮಾಡುವುದಿಲ್ಲ. ಆದ್ದರಿಂದ ಈ ಹೊಸ ರಾಣಿಯನ್ನು ಸುತ್ತುಗಟ್ಟಿ ಜೀವದ ಕೋಟೆಯಂತೆ ನಿಂತು ಸೆರೆಹಾಕುತ್ತವೆ. ಈ ಜೀವದ ಕೋಟೆಯಲ್ಲಿ ಸೆರೆ ಸಿಕ್ಕ ಪರರಾಣಿ ೨೪ ಘಂಟೆಗಳಲ್ಲಿ ಸಾಯಬಹುದು. ಆದರೆ ಅಷ್ಟರಲ್ಲಿ ನಗರದ ರಾಣಿ ಅಲ್ಲಿಗೆ ಬಂದರೆ, ಕಾದಲು ಕಾಲ್ಕೆರೆಯುತ್ತಾಳೆ. ಸಜೀವ ಕೋಟೆ ಕಟ್ಟಿ ನಿಂತ ಜೇನುಗಳು ದೂರಸರಿದು ನಿಂತು ಈ ಎರಡು ರಾಣಿ ಜೇನುಗಳ ನಡುವೆ ಆಗುವ ಯುದ್ಧವನ್ನು ನೋಡುತ್ತವೆ. ರಾಣಿಯರ ಈ ಯುದ್ಧ ಬಹಳ ಹೊತ್ತು ನಡೆದು ಜಯಾಪಜಯಗಳು ತೀರ್ಮಾನವಾಗದಿದ್ದರೆ ಬಳಲಿದ ರಾಣಿ ಜೇನು ಓಡಲೆತ್ನಿಸುತ್ತದೆ. ಪ್ರೇಕ್ಷಕ ಜೇನುಹುಳುಗಳು ಅದನ್ನು ಸೆರೆಹಿಡಿದು ಮೊದಲಿನಂತೆ ಸುತ್ತು ಕೋಟೆ ಕಟ್ಟಿ ನಿಲ್ಲುತ್ತವೆ. ಹೀಗೆ ಸೆರೆಯಾದ ರಾಣಿ ನಗರದ ರಾಣಿಯಾಗಿರಬಹುದು. ಇಲ್ಲವೆ ಹೊಸ ರಾಣಿ ಯಾಗಿರಬಹುದು. ಸೆರೆಯ ರಾಣಿ ಜೇನು ಚೇತರಿಸಿಕೊಂಡು ಪುನಃ ಕಾದುವ ಅಭಿಲಾಷೆಯನ್ನು

ತೋರಿಸಿದಾಕ್ಷಣ ಅವಳನ್ನು ಹೊರಗೆ ಬಿಡುತ್ತವೆ. ಒಂದು ರಾಣಿ ಜೇನು ಸಾಯಲೇ ಬೇಕು. ಸಾಮಾನ್ಯವಾಗಿ ನಗರದ ರಾಣಿಯೆ ಜಯಗಳಿಸುತ್ತದೆ. ಇದಕ್ಕೆ ಕಾರಣ ಹೊರಗಿನಿಂದ ಬಂದ ರಾಣಿಗೆ ತಾನು ಹೊಸಬರ ನಡುವೆ ಇರುವೆನೆಂಬ ಭೀತಿ ಇರಬಹುದು.

ಇದ್ದಕ್ಕಿದ್ದ ಹಾಗೆ ರಾಣಿಯನ್ನು ಗೂಡಿನಿಂದ ತೆಗೆದು ಬೇರೆ ಕಡೆ ಇಟ್ಟರೆ ತಕ್ಷಣ ನಗರದಲ್ಲೆಲ್ಲಾ ಹುಯಿಲು ಹಬ್ಬುವುದು. ಅಶಾಂತಿ ಹರಡುವುದು.—ಕೆಲವು ಘಂಟೆಗಳ ನಂತರ ಈ ರಾಣಿಯನ್ನು ಗೂಡಿನೊಳಗೆ ಬಿಟ್ಟಾಕ್ಷಣ ಕೆಲಸಗಾತಿ ಕುಮಾರಿಯರೆಲ್ಲಾ ರಾಣಿಯ ಕಡೆ ನುಗ್ಗಿ ಅವಳನ್ನು ಉಪಚರಿಸಿ ಮಕರಂದವನ್ನು ಉಣಿಸುತ್ತವೆ. ಕೆಲಸಗಾತಿಯರಲ್ಲಿ ಒಂದು ಗುಂಪು ರಾಣಿಯ ಅಕ್ಕಪಕ್ಕಗಳಲ್ಲಿ ದಾರಿಯುದ್ದಕ್ಕೂ ಸಾಲಾಗಿನಿಂತು ರಾಣಿನಿವಾಸಕ್ಕೆ ಮಾರ್ಗವನ್ನು ಮಾಡಿಕೊಡುತ್ತವೆ. ಉಳಿದವು ತಮ್ಮ ತಲೆಯನ್ನು ಬಗ್ಗಿಸಿ ಉದರವನ್ನು ಮೇಲಕ್ಕೆತ್ತಿ ಅರ್ಧ ಚಂದ್ರಾಕಾರದಲ್ಲಿ ನಿಂತು ಮಂತ್ರ ಘೋಷದಂತೆ ಒಂದು ಬಗೆಯ ನಾದವನ್ನು ಮಾಡುತ್ತ ರಾಜಭಕ್ತಿಯನ್ನು ಅರ್ಪಿಸಿ ರಾಣಿಯನ್ನು ಸ್ವಾಗತಿಸುತ್ತವೆ. ಅವುಗಳ ಗೂಡಿನಿಂದ ನಾವು ತೆಗೆದ ರಾಣಿಯನ್ನಲ್ಲದೆ ಬೇರೆ ರಾಣಿಯನ್ನು ಗೂಡಿನೊಳಗೆ ಬಿಟ್ಟರೆ ತಕ್ಷಣ ಅವಳನ್ನು ಸೆರೆ ಹಿಡಿದು ಸುತ್ತ ನಿಂತು ಜೀವದ ಕೋಟೆಯನ್ನು ರಚಿಸಿ ಈ ರಾಣಿ ಉಸಿರುಕಟ್ಟಿ ಸಾಯುವಂತೆ ಮಾಡುತ್ತವೆ.

ಈ ನಿಶ್ಚಲ ಭಕ್ತಿಯು ಜೇನುಗಳಿಗೆ ಮಂಕುಹಿಡಿಸಿ ತಾನು ಬಿಟ್ಟ ಹೊಸ ರಾಣಿಯನ್ನು ಸ್ವಾಗತಿಸುವಂತೆ ಮಾಡುವ ಮಾರ್ಗವನ್ನು ಜೇನು ಸಾಕಣೆಯಲ್ಲಿ ನುರಿತ ತಜ್ಞರು ಕಂಡು ಹಿಡಿದಿದ್ದಾರೆ. ರಾಣಿ ಜೇನಿನಲ್ಲಿ ಇತರ ಜೇನು ಗಳು ಇಟ್ಟಿರುವ ಆದರ, ಪ್ರೀತಿ, ರಾಜಗೌರವ ಸಹಜ. ಆದರೆ ಜೇನುಗಳಿಗೆ ಜ್ಞಾಪಕಶಕ್ತಿ ಕಡಮೆ ಎಂದು ಕಾಣು ತ್ತದೆ. ಕದ್ದು ತಂದ ಆ ಗೂಡಿನ ರಾಣಿಯನ್ನು ಕೆಲವು ದಿನಗಳ ನಂತರ ಆ ಗೂಡಿನಲ್ಲಿ ಬಿಟ್ಟರೆ ಅವಳ ಸ್ಥಿತಿ ಯಾವುದೋ ಅಪರಿಚಿತ ರಾಣಿಜೇನಿನಂತಾಗಿ ಸಜೀವ ಕೋಟೆಯಲ್ಲಿ ಸಿಕ್ಕು ಸಾವನಪ್ಪುತ್ತಾಳೆ. ಏಕೆಂದರೆ ರಾಣಿ ಜೇನು ಕಣ್ಮರೆಯಾದ ಮೇಲೆ ರಾಣಿಯ ಪುನರಾಗಮನವನ್ನು ಕಾದುನೋಡಿ ಸಾಕಾದ ಈ ಪ್ರಜಾಪರಿಷತ್ತು ಒಂದು ತೀರ್ಮಾನಕ್ಕೆ ಬಂದು ಮೂರು ದಿನಗಳೊಳಗಿನ ಪ್ರಾಯದ ಕೆಲಸಗಾರ ಹುಳುಗಳನ್ನು ರಾಜಕುಮಾರಿಯರನ್ನು ಸಾಕುವ ಅರಮನೆಗಳಲ್ಲಿಟ್ಟು ರಾಜರಸವಿತ್ತು ಪಾಲಿಸುತ್ತವೆ. ಈ ಅರಮನೆಗಳೊಂದ ರಿಂದ ರಾಣಿಯೊಬ್ಬಳು ಬರುವುದರಿಂದ ಜನಾಂಗದ ವೃದ್ಧಿಗೆ ಯಾವ ಭೀತಿಯೂ ಇಲ್ಲವಾಗುತ್ತದೆ. ಆಗ ಹಳೆಯ ರಾಣಿಯ ನೆನಹು ಉಳಿಯದೆ ಹೋಗುತ್ತದೆ.

# ಹೊಸನಗರದ ಅಸ್ತಿಭಾರ

ಸುಂದರ ಮಂದಿರಗಳಲ್ಲಿ ಮಲಗಿರುವ ಸಾವಿರಾರು ಮಕ್ಕಳನ್ನೂ, ಅತುಳ ಐಶ್ವರ್ಯವನ್ನೂ ಬಿಟ್ಟು ಹೊರಟ ಜೇನುಗಳ ಹಿಂಡು ಬಹುದೂರದ ಹೊಸನಗರದ ನಿವೇಶನಕ್ಕೆ ತೆರಳುತ್ತವೆ. ಅವುಗಳನ್ನು ನಾವು ಹಿಂಬಾಲಿಸಲಾರೆವು. ಹೀಗೆ ಹೊರಟ ಹಿಂಡು ಮಾತೃನಗರವನ್ನು ಮರೆತು ಬಿಡುತ್ತದೆ. ಸಕಲ ಸಂಪತ್ತಿನ ನಗರವನ್ನು ಬಿಟ್ಟು ಹಾರಿಬಂದ ಹಿಂಡು ಜೇನು ಸಾಕುವ ವ್ಯವಸಾಯಗಾರನ ಗೂಡನ್ನು ಸೇರುತ್ತದೆ ಎಂದು ಇಟ್ಟುಕೊಳ್ಳೋಣ.

ಇಲ್ಲಿ ಈ ಹೊಸ ನಿವೇಶನದಲ್ಲಿ ಒಂದು ಹನಿ ಮಕರಂದವಿಲ್ಲ. ಒಂದೇ ಒಂದು ಕಣ ಪುಷ್ಪಪರಾಗವಿಲ್ಲ. ಒಂದು ತುಣುಕು ಮೇಣವಿಲ್ಲ. ಸುತ್ತಲೂ ನಿರ್ಜನ ಪ್ರದೇಶ, ನಯವಾದ ಗೋಡೆ. ಎತ್ತೆತ್ತಲೂ ಕತ್ತಲು. ಆದರೇನಂತೆ ನಿಷ್ಪ್ರಯೋಜಕ ನಿಟ್ಟುಸಿರುಗಳು ಜೇನಿನ ಜಾತಿಗೆ ತಿಳಿಯದು. ಸೇನಾಧಿಪತಿಯ ಆಜ್ಞೆಯನ್ನು ಪಾಲಿಸುವ ಸೈನಿಕರಂತೆ ಕಷ್ಟ ಪರಂಪರೆಗಳನ್ನು ಗಮನಿಸದೆ ಕಾರ್ಯೋನ್ಮುಖವಾಗುತ್ತವೆ. ರೈತನು ನಿರ್ಮಿಸಿಕೊಟ್ಟ ಮರದ ಜೇನು ಪೆಟ್ಟಿಗೆಯ ಗೋಡೆಗಳನ್ನು ಹತ್ತುತ್ತವೆ. ಮೇಲಿನ ಚೌಕಟ್ಟಿನ ತುದಿಯನ್ನು ಮೊದಲು ತಲಪುವ ಜೇನುಹುಳು ತನ್ನ ಮುಂಗಾಲ ಉಗುರುಗಳಿಂದ ಪಟ್ಟಿ

ಯನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತದೆ. ಉಳಿದ ಹುಳುಗಳು ಅದನ್ನು ಗಟ್ಟಿಯಾಗಿ ಹಿಡಿದು ಕೊಳ್ಳುತ್ತವೆ. ಹೀಗೆ ಒಂದನ್ನೊಂದು ಅಂಟಿಕೊಂಡು ತಲೆ ಕೆಳಗಾದ ಕರಿಯ ಗೋಪುರವನ್ನು ರಚಿಸುತ್ತವೆ. ಈ ಕರಿಯ ಗೋಪುರದ ಗುಂಪಿನಲ್ಲಿ ನಿಧಾನವಾಗಿ ನಿಶ್ಚಲತೆ, ನಿಶ್ಶಬ್ದ ಆವರಿಸಿ ಸ್ವಲ್ಪ ಹೊತ್ತಿನಲ್ಲೇ ನಿರ್ಜೀವ ಹುಳುಗಳ ರಾಶಿ ಯಂತೆ ಕಾಣುತ್ತವೆ.

ಕೆಳಗೆ ಗೂಡಿನ ನೆಲದ ಮೇಲೆ ಕೆಲವು ಹುಳುಗಳು ಉಳಿದುಕೊಂಡಿವೆ. ಅವು ಗುಂಪನ್ನು ಸೇರುವ ಅಪೇಕ್ಷೆ ಯನ್ನು ತೋರಿಸುತ್ತಿಲ್ಲ. ಆದರೆ ರೈತನು ಇಟ್ಟ ಜೇನು ಪೆಟ್ಟಿಗೆಯಲ್ಲಿ ಬಿದ್ದಿರಬಹುದಾದ ಕಸಕಡ್ಡಿಗಳನ್ನೂ, ಮಣ್ಣು ಮರಳು ಕಣಗಳನ್ನೂ ತೆಗೆದು ಹಾಕಿ ಚೊಕ್ಕಟ ಮಾಡುತ್ತವೆ. ಮಕರಂದದ ರುಚಿಯಂತೆಯೇ ಜೇನು ಗಳ ಶುಚಿಯೂ ಶ್ರೇಷ್ಠವಾದದ್ದು. ಹೊಸನಗರ ನಿವೇಶನ ವನ್ನು ಕೂಲಂಕಷವಾಗಿ ಪರೀಕ್ಷಿಸಿ ತಾಯ್ನೆಲೆಯನ್ನು ಬಿಟ್ಟು ಬರುವಾಗ ತಾವು ಹೊತ್ತು ತಂದ "ಜೇನಂಟಿ" ನಿಂದ ನಿವೇಶನದಲ್ಲಿರುವ ಬಿರುಕುಗಳನ್ನು ಮುಚ್ಚುತ್ತವೆ. ಕೆಲವು ಜೇನುಹುಳುಗಳು ಗೋಡೆಗಳಿಗೆಲ್ಲಾ ಹೊಳಪು ಕೊಡುತ್ತವೆ. ಬಾಗಿಲನ್ನು ಕಾಯಲು ಕಾವಲುಗಾರ ಸಿಪಾಯಿಗಳು ನೇಮಕವಾಗಿ ತಮ್ಮ ತಮ್ಮ ಸ್ಥಳಗಳಲ್ಲಿ ನಿಂತು ಕಾವಲು ಕಾಯುತ್ತಾರೆ. ಒಂದು ಗುಂಪು ಕೆಲಸಗಾತಿಯರು ಪುಷ್ಪಪರಾಗ ಕ್ರೀಡೆಯಲ್ಲಿ ತೊಡಗು

ತ್ತಾರೆ. ಹೊಸ ಜೀವನದ ಹೊನಲು ಹರಿಯಲು ಪ್ರಾರಂಭವಾಗುತ್ತದೆ.

ಕಪ್ಪು ಮಣಿಗಳನ್ನು ಪೋಣಿಸಿದಂತೆ ಮುತ್ತಿರುವ ಈ ತಲೆಕೆಳಗಾದ ಗೋಪುರದ ಗುಂಪಿನಲ್ಲಿ ಆಗುವ ಮೇಣದ ಉತ್ಪತ್ತಿಯ ವಿವರಗಳನ್ನು ತಿಳಿಯುವುದು ಕಷ್ಟ. ಅಲ್ಲಿ ನಡೆಯುವ ಕ್ರಿಯೆಗಳು ನಿಮಿಷ ನಿಮಿಷಕ್ಕೂ ಒತ್ತಾಗುತ್ತಿರುವ ಕಪ್ಪು ಗುಂಪಿನ ಕತ್ತಲ ಅಂತರಾಳದಲ್ಲಿ ಲೀನವಾಗುತ್ತವೆ. ಮಕರಂದವನ್ನು ಹೇಗೆ ಮೇಣವನ್ನಾಗಿ ಪರಿವರ್ತಿಸುತ್ತವೆ ಎನ್ನುವುದು ರಸಾಯನ ಶಾಸ್ತ್ರದ ಜಟಿಲ ಸಮಸ್ಯೆ. ಇಷ್ಟನ್ನು ಮಾತ್ರ ಹೇಳಬಹುದು. ಒತ್ತಾಗಿ ಹೆಣೆದುಕೊಂಡ ಈ ಗುಂಪು ೧೮ ರಿಂದ ೨೪ ಘಂಟೆಗಳವರೆಗೆ ಹಾಗೆಯೇ ಇರುತ್ತದೆ. ಆಗ ಗುಂಪಿನೊಳಗೆ ಬೆಂಕಿ ಹತ್ತಿ ಉರಿಯುತ್ತಿದೆಯೇನೋ ಎನ್ನುವಷ್ಟು ಶಾಖ ಉತ್ಪತ್ತಿಯಾಗುತ್ತದೆ. ಅನಂತರ ಪ್ರತಿಯೊಂದು ಪ್ರಾಯದ ಜೇನಿನ ಹೊಟ್ಟೆಯ ಕೆಳಗಿರುವ ನಾಲ್ಕು ರಂಧ್ರಗಳಿಂದ ನಿಚ್ಚಳವಾದ ಪಾರದರ್ಶಕ ಬಿಳಿಯ ಮೇಣದ ಪದರಗಳು ಒಸರುತ್ತವೆ. ತಲೆಕೆಳಗಾದ ಗೋಪುರದಲ್ಲಿರುವ ಬಹುಸಂಖ್ಯೆಯ ಜೇನು ಹುಳುಗಳು ಈ ರೀತಿ ದಂತದ ಮುತ್ತಿನಂಥ ಮೇಣದಿಂದ ಅಲಂಕೃತವಾದಾಕ್ಷಣ ಇದ್ದಕ್ಕಿದ್ದ ಹಾಗೆ ಸ್ಫೂರ್ತಿಗೊಂಡ ಒಂದು ಜೇನುಹುಳ ತನ್ನ ಉದರದ ಪಕ್ಕೆಗಳಲ್ಲಿ ಒಸರುವ ಮೇಣವನ್ನು ಹೊತ್ತುಕೊಂಡು ಗುಂಪನ್ನು ಬಿಟ್ಟು

ಗೋಪುರದ ಮೇಲೆ ಹತ್ತಿ ಅದರ ತುದಿಯನ್ನು ಸೇರು ತ್ತದೆ. ಅಲ್ಲಿ ಭದ್ರವಾಗಿ ಕುಳಿತುಕೊಂಡು ತನ್ನ ಕೆಲಸಕ್ಕೆ ಅಡ್ಡಿ ತರುವಂತೆ ಸುತ್ತಲೂ ಮುತ್ತಿರುವ ಹುಳು ಗಳ ಕಡೆಗೊಮ್ಮೆ ನೋಡಿ ತನ್ನ ತಲೆಯನ್ನು ಬಲವಾಗಿ ಕೊಡವಿ ಅವುಗಳನ್ನು ಅತ್ತಿತ್ತ ಕೆಡವುತ್ತದೆ. ಅನಂತರ ತನ್ನ ಉದರದ ಪಕ್ಕೆಗಳಲ್ಲಿ ಒಸರಿ ನಿಂತಿರುವ ಎಂಟು ಮೇಣದ ಪದರಗಳಲ್ಲಿ ಒಂದನ್ನು ತನ್ನ ಉಗುರು ಮತ್ತು ಬಾಯಿಂದ ಹಿಡಿದು ಕೀಳುತ್ತದೆ. ಮೇಣದ ಕೆಲಸವನ್ನು ಮಾಡುವ, ಮೆದುಮರವನ್ನು ಕೊರೆಯುವ ಕುಶಲ ಕೆಲಸಗಾರನಂತೆ ಮೇಣವನ್ನು ಎಳೆದು, ಹೀಚಿ, ನಯ ಮಾಡಿ ತನಗೆ ತೃಪ್ತಿಕರವಾದ ರೂಪನ್ನು ಕೊಟ್ಟು ಗೋಪುರದ ತುಟ್ಟ ತುದಿಗೆ ಅಂಟಿಸಿ ಪ್ರಥಮ ಅಸ್ತಿಭಾರ ಶಿಲೆಯ ಸಮಾರಂಭವನ್ನು ನೆರವೇರಿಸುತ್ತದೆ. ಜೇನು ಗಳಿಂದ ನಿರ್ಮಿತವಾಗುವ ಈ ಸುಂದರ ನಗರ ಆಕಾಶದ ಕಡೆಯಿಂದ ಭೂಮಿಯ ಕಡೆ ಬೆಳೆಯುತ್ತದಲ್ಲದೆ ಮಾನವ ನಿರ್ಮಿತ ನಗರಗಳಂತೆ ಭೂಮಿಯಿಂದ ಆಕಾಶದತ್ತ ಏರುವುದಿಲ್ಲ. ಅಸ್ತಿಭಾರವನ್ನು ಹಾಕಿದ ಈ ಜೇನು ಹುಳು ಉಳಿದ ಏಳು ಪದರ ಮೇಣವನ್ನು ಕಿತ್ತು ತನ್ನ ಕುಶಲತೆಯನ್ನು ಉಪಯೋಗಿಸಿ ಅದಕ್ಕೆ ಬೇಕಾದ ರೂಪ ಕೊಟ್ಟು ಅಂಟಿಸಿ, ಒಮ್ಮೆ ನಾಲಿಗೆಯನ್ನು ಸೆಕ್ಕಿ, ಆಘ್ರಾಣ ಶಲಾಕೆಗಳನ್ನು ಕುಣಿಸಿ ತಾನು ಎಷ್ಟು ಅನಿರೀಕ್ಷಿತವಾಗಿ ಕೆಲಸವನ್ನು ಪ್ರಾರಂಭಿಸಿತೊ ಅಷ್ಟೆ

ಅನಿರೀಕ್ಷಿತವಾಗಿ ಆ ಸ್ಥಳವನ್ನು ಬಿಟ್ಟು ಬಂದು ಗುಂಪಿನಲ್ಲಿ ಮಾಯವಾಗುತ್ತದೆ. ಮೇಣದ ಹೊರೆ ಹೊತ್ತ ಮತ್ತೊಂದು ಜೇನು ಪ್ರಥಮ ಕೆಲಸಗಾತಿಯು ಬಿಟ್ಟ ಸ್ಥಳವನ್ನು ತಕ್ಷಣ ಸೇರಿ ತನ್ನ ಜೊತೆಗಾತಿ ಮಾಡಿದ ಕೆಲಸಗಳಲ್ಲಿ ತನಗೆ ಸರಿಯಲ್ಲವೆಂದು ತೋರಿದ ಭಾಗ ಗಳನ್ನು ತಿದ್ದಿ, ಸರಿಪಡಿಸಿ, ತನ್ನಲ್ಲಿರುವ ಮೇಣದಿಂದ ಆ ಕೆಲಸವನ್ನು ಮುಂದುವರಿಸಿ ಕ್ಷಣಾರ್ಧದಲ್ಲಿ ಗುಂಪಿನಲ್ಲಿ ಮರೆಯಾಗುತ್ತದೆ. ಹೀಗೆ ಒಂದಾದ ಮೇಲೊಂದರಂತೆ ಇತರ ಜೇನುಹುಳುಗಳು ತಮ್ಮ ತಮ್ಮ ಭಾಗದ ಕೆಲಸ ವನ್ನು ಮಾಡುತ್ತವೆ.

ಹೀಗೆ ಜೇನುಹುಳುಗಳು ತಮ್ಮ ನೂತನ ನಗರ ನಿರ್ಮಾಣವನ್ನು ಪೂರ್ಣಗೊಳಿಸಲು ಸಾಕೆಂದು ತೋರುವ ದಪ್ಪದ ಮೇಣದ ರೊಟ್ಟಿಯನ್ನು ರೂಪುಗೊಳಿಸುತ್ತವೆ. ಈವರೆಗೂ ಮೇಣದ ರೊಟ್ಟಿಯನ್ನು ತಯಾರಿಸಿದ ಕೆಲಸ ಗಾತಿಯರಿಂದ ಸ್ವಲ್ಪ ಬೇರೆ ತೋರುವ ಒಂದು ಜೇನು ಹುಳು ಈ ಮೇಣದ ಅಚ್ಚಿನ ಮೇಲೆ ಕಾಣಿಸಿಕೊಳ್ಳುತ್ತದೆ. ಈ ಜೇನು ಕುಶಲ ಶಿಲ್ಪಿ ಜಾತಿಯದು. ನಗರದ ಅಸ್ತಿ ಭಾರವನ್ನು ಹಾಕಿದ ಜೇನುಗಳಂತೆ ಇದರ ಉದರದಿಂದ ಮೇಣ ಒಸರುವುದಿಲ್ಲ. ಈ ನಗರ ಶಿಲ್ಪಿ ಶ್ರೇಷ್ಠ ಬಂದಾಕ್ಷಣ ಇತರ ಜೇನುಗಳು ಅದಕ್ಕೆ ಸ್ಥಳ ಬಿಟ್ಟು ಕೊಟ್ಟು ಈ ಶಿಲ್ಪಿಯ ರಚನಾ ಕೌಶಲ್ಯವನ್ನೆ ನೋಡು ತ್ತವೆ. ಈ ಜೇನುಹುಳು ನಗರವ ಮೊದಲ ಮಂದಿರ

ವನ್ನು ನಿರ್ಮಿಸುವ ಸ್ಥಳವನ್ನು ಗೊತ್ತುಮಾಡಿ ಮೇಣವನ್ನು ಒಗೆದು ಹೆಚ್ಚಿಗೆಯಾದ ಮೇಣವನ್ನು ಪಕ್ಕಕ್ಕೆ ಹಾಕಿ ಈ ಪ್ರಥಮ ಮಂದಿರ ನಿರ್ಮಾಣದಲ್ಲಿ ತನ್ನ ಕೆಲಸವನ್ನು ಪೂರೈಸಿ ಇದ್ದಕ್ಕಿದ್ದ ಹಾಗೆ ಗುಂಪಿನಲ್ಲಿ ಮಾಯವಾಗುತ್ತದೆ. ಗೊತ್ತಾದ ರೇಖಾಗಣಿತ ಶಾಸ್ತ್ರ ಬದ್ಧವಾಗಿ ಈ ಪ್ರಥಮ ಸೌಧದ ಸುತ್ತಲೂ ಇತರ ಸೌಧದ ಸಾಲುಗಳು ನಿರ್ಮಾಣವಾಗುತ್ತವೆ. ಮೊದಲನೆಯ ಶಿಲ್ಪಿ ಹೊರಟುಹೋದಾಕ್ಷಣ ಮತ್ತೊಂದು ಅದು ಬಿಟ್ಟ ಕೆಲಸವನ್ನು ಮುಂದುವರಿಸುತ್ತದೆ. ಮೂರನೆಯದು ಪೂರ್ತಿ ಮಾಡುತ್ತದೆ. ಅಕ್ಕಪಕ್ಕದಲ್ಲಿರುವ ಜೇನು ಹುಳುಗಳು ಮೇಣದ ಅಚ್ಚಿನ ಎರಡೂ ಕಡೆಗಳಲ್ಲಿ ಗೂಡುಗಳನ್ನು ತೋಡುವ ಕೆಲಸವನ್ನು ಏಕಕಾಲದಲ್ಲಿ ಪ್ರಾರಂಭಿಸುತ್ತವೆ. ದೇಹಶ್ರಮದ ಪ್ರಶಂಸೆಯನ್ನು ಹಿಂಡಿನ ಪ್ರತಿಯೊಂದು ಹುಳುವು ಹೊಂದಬೇಕೆಂಬ ಪವಿತ್ರ ತತ್ವವನ್ನು ಒಪ್ಪಿಕೊಂಡು ಇವು ಕೆಲಸ ಮಾಡುತ್ತವೆ. ಮಾನವ ಸಮಾಜದಲ್ಲಿ ಈ ನೇಮ ನಿಂತಿಲ್ಲ.

ಸುವ್ಯವಸ್ಥಿತವಾದ ಜೇನುಗಳ ಸುಂದರ ನಗರ ರೂಪಗೊಳ್ಳುತ್ತಿದೆ. ಗೊತ್ತಾದ ಅಳತೆಯ ಸಮಾನಾಂತರ ಷಟ್ ಭುಜಗಳ ಸುಂದರ ಮಂದಿರಗಳು ಇನ್ನೂ ನಿರ್ಮಾಣವಾಗುತ್ತಿವೆ. ಮೇಣವನ್ನು ಉತ್ಪತ್ತಿಮಾಡಿ ಅಸ್ತಿಭಾರವನ್ನು ಹಾಕಿ ಮೇಣದ ರೊಟ್ಟಿಯನ್ನು ಬೇಕಾದ ಪ್ರಮಾಣಕ್ಕೆ ಸರಿಯಾಗಿ ನಿರ್ಮಿಸಿದ ಅಸ್ತಿಭಾರ ಕೆಲಸ

ಗಾತಿಯರು ತಾವು ರಚಿಸಿದ ಪ್ರಥಮ ಮೇಣದ ರೊಟ್ಟಿಯ ಮೇಲೆ ಪ್ರಥಮ ಮಂದಿರ ನಿರ್ಮ್ಮಾಣವಾದ ತಕ್ಷಣ ಇನ್ನೊಂದು ರೊಟ್ಟಿಯನ್ನು ಮೊದಲನೆ ರೊಟ್ಟಿಯಿಂದ ಗೊತ್ತಾದ ಅಂತರದಲ್ಲಿ ರಚಿಸುತ್ತವೆ. ಹೀಗೆ ಮೂರು, ನಾಲ್ಕು ರೊಟ್ಟಿಗಳನ್ನು ಸಮಪ್ರಮಾಣದಲ್ಲಿ ಸಮಾನಾಂತರದಲ್ಲಿ ರಚಿಸುತ್ತವೆ. ಜೇನು ಹುಳುಗಳು ಈ ಅಳತೆ ಪ್ರಮಾಣಗಳಲ್ಲಿ ತಪ್ಪುವುದು ಬಹಳ ವಿರಳ. ಒಂದು ಜೇನು ಹುಟ್ಟಿನಿಂದ ಇನ್ನೊಂದಕ್ಕೆಅರ್ಧ ಇಂಚು ಸ್ಥಳವಿರುತ್ತದೆ. ಎಂದರೆ ಸುಮಾರು ಜೇನು ಹುಳುಗಳ ಗಾತ್ರದ ಎರಡರಷ್ಟು—ಬೇರೆ ರೀತಿಯಲ್ಲಿ ಈ ಅಳತೆಯನ್ನು ಹೇಳುವುದಾದರೆ, ಎರಡು ಹುಟ್ಟಿನ ನಡುವೆ ಇರುವ ದಾರಿ ಆ ಕಡೆ ಈ ಕಡೆ ಜೇನುಗಳು ಒಂದಕ್ಕೊಂದು ಬೆನ್ನು ಮಾಡಿ ನಡೆಯಲು ಅನುಕೂಲವಾಗುವಷ್ಟು ಸ್ಥಳ ಇಡುತ್ತವೆ. ಕೆಲವು ಸಾರಿ ಅಳತೆ ತಪ್ಪಿ ಮಾಡಿದ ಕೆಲಸವನ್ನು ಪುನಃ ಮಾಡಿ ಸರಿಪಡಿಸುತ್ತವೆ.

ಜೇನುಹುಳುಗಳು ನಾಲ್ಕು ಬಗೆಯ ಮನೆಯನ್ನು ಕಟ್ಟುತ್ತವೆ. ಮೊದಲನೆಯದು ರಾಣಿಗಾಗಿ ಕಟ್ಟುವ ರಾಜನಿವಾಸಿಗಳು. ಇವು ವಿಶಾಲವಾದ ವಿಶೇಷರೀತಿಯ ಮನೆಗಳು, ಎರಡನೆಯ ಗುಂಪು ಗಂಡುಹುಳುಗಳಿಗಾಗಿ ನಿರ್ಮ್ಮಿಸಿರುವ ದೊಡ್ಡಮನೆಗಳು. ಅವಶ್ಯಕತೆಬಿದ್ದಾಗ ಹೆಚ್ಚು ಆಹಾರಗಳನ್ನು ಶೇಖರಿಸಲು ಈ ಮನೆಗಳನ್ನು ಉಪಯೋಗಿಸುತ್ತವೆ; ಮೂರನೆಯ ಗುಂಪು ಸಾಮಾನ್ಯ

ವಾದ ಸಣ್ಣ ಮನೆಗಳು. ಇವು ಕೆಲಸಗಾತಿ ಜೇನುಹುಳು ಗಳ ತೊಟ್ಟಿಲುಗಳು ಮತ್ತು ಸಾಮಾನ್ಯ ಉಗ್ರಾಣಗಳಾಗಿ ಉಪಯೋಗಿಸುವ ಮನೆಗಳು. ಜೇನು ಹುಟ್ಟಿನ ೪/೫ ಭಾಗ ಈ ಸಣ್ಣ ಮನೆಗಳಿಂದ ಕೂಡಿರುತ್ತದೆ. ಕೊನೆಯು ದಾಗಿ ದೊಡ್ಡ ಮತ್ತು ಸಣ್ಣಮನೆಗಳನ್ನು ಸೇರಿಸುವ ವಿಶೇಷರೀತಿಯ ಮನೆಗಳು, ಈ ಮನೆಗಳ ಪ್ರಮಾಣ ಒಂದೇ ಸಮನಾಗಿರುವುದಿಲ್ಲ. ಆದರೆ ಎರಡು ಮತ್ತು ಮೂರನೆ ಗುಂಪಿನಮನೆಗಳು ಒಂದೇ ರೀತಿಯ ಅಳತೆ ಪ್ರಮಾಣದಲ್ಲಿ ನಿರ್ಮಿತವಾಗಿರುತ್ತವೆ. ಈ ಮನೆಗಳೆಲ್ಲಾ ಸಮಾನಾಂತರ ಷಟ್‌ಭುಜಗಳಿಂದ ಕೂಡಿರುತ್ತವೆ. ಮನೆಗಳಲ್ಲಿ ತುಂಬಿದ ಮಕರಂದ ಪಕ್ವವಾಗುವಾಗ ಹೆಚ್ಚಿ ಚೆಲ್ಲದಿರಲೆಂದು ಈ ಮನೆಗಳನ್ನು ಸಮತಳರೇಖೆಗೆ ಸಮಾನಾಂತರವಾಗಿಡದೆ ೩–೪ ಡಿಗ್ರಿ ಓರೆಯಾಗಿಡುತ್ತವೆ.

ಒಂದು ಸಮತಳದ ಮೇಲೆ ಸ್ವಲ್ಪವೂ ಸ್ಥಳನಷ್ಟ ವಾಗದಂತೆ ಸಮಬಾಹುತ್ರಿಭುಜ, ಚಚ್ಚೌಕ ಇಲ್ಲವೇ ಒಂದೇ ಅಳತೆಯ ಷಟ್‌ಭುಜಗಳನ್ನು ಜೋಡಿಸಲು ಮಾತ್ರ ಸಾಧ್ಯ. ನಾಲ್ಕನೆಯ ಬಗೆ ಇಲ್ಲಿ ಎಂದು ಗಣಿತ ಶಾಸ್ತ್ರಜ್ಞರು ಸಾರುತ್ತಾರೆ. ಈ ಮೂರುವಿಧಗಳಲ್ಲಿ ಷಟ್‌ಭುಜಗಳು ಕಟ್ಟಡಕ್ಕೆ ಪರಮಾವಧಿಯ ಬಲವನ್ನು ಕೊಡುತ್ತವೆ. ಈ ನಮ್ಮ ಜೇನುಗಳು ಗಣಿತಶಾಸ್ತ್ರ ಪ್ರವೀಣತೆಯನ್ನು ಪಡೆದಿರುವಂತೆ ತಮ್ಮ ಕಟ್ಟಡಗಳಿಗೆ ಷಟ್‌ಭುಜಗಳನ್ನೇ ಆರಿಸಕೊಂಡಿವೆ. ಈ ಜೇನುಹುಳು

ಗಳು · ಷಟ್ಭುಜಗಳನ್ನು ಅಳವಡಿಸುವರೀತಿಯಲ್ಲಿಯೂ ಹೆಚ್ಚಿನ, ಮೇಣದ ಉಳಿತಾಯವಾಗುತ್ತದೆ. ಜೇನು ಹುಳುಗಳ ಈ ಲೆಖ್ಖ, ರೇಖಾಶಾಸ್ತ್ರ ಮತ್ತು ಗಣಿತ ಶಾಸ್ತ್ರ ದಿಗ್ದಂತಿಗಳಿಗೆ ಆಶ್ಚರ್ಯವನ್ನುಂಟುಮಾಡಿವೆ. ನಗರದಲ್ಲಿ ಸಂಚರಿಸಲು ಹತ್ತಿರದ ಕಾಲುದಾರಿಗಳನ್ನು ಅಲ್ಲಲ್ಲೆ ನಿರ್ಮಿಸಿವೆ. ಮೇಣದ ರೊಟ್ಟಿಯ ಎರಡು ಪಕ್ಕಗಳಿಂದಲೂ ಏಕಕಾಲದಲ್ಲಿ ಮನೆಗಳನ್ನು ನಿರ್ಮಿಸುವಾಗ ಅನೇಕ ಜೇನುಗಳು ಎರಡು ಕಡೆಯಿಂದ ಮೇಣವನ್ನು ಅಗಿಯುತ್ತಿದ್ದರೂ ಸಹ ಒಂದು ಕಡೆಯಾದರೂ ಹೆಚ್ಚಾಗಲಿ, ಕಡಮೆಯಾಗಲೀ ಮೇಣವನ್ನು ತೆಗೆಯುವುದಿಲ್ಲ. ವಿರುದ್ಧ ದಿಕ್ಕುಗಳಲ್ಲಿ ಮೇಣವನ್ನು ತೋಡುತ್ತಿರುವ ಹುಳುಗಳು ಒಂದನ್ನೊಂದು ತಾಕಲಾಡುವುದಿಲ್ಲ. ಅಲ್ಲದೆ ಒಂದೆಡೆಯೂ ಒಂದು ಕಡೆಯ ಮನೆಯಿಂದ ಇನ್ನೊಂದು ಕಡೆಯ ಮನೆಗೆ ತೂರಿ ಹೋಗುವುದಿಲ್ಲ. ಒಂದು ಮನೆಗೂ ಇನ್ನೊಂದು ಮನೆಗೂ ನಡುವೆ ಇರುವ ಗೋಡೆ ತುಂಬಾ ತೆಳುವಾಗಿರುತ್ತದೆ—ಜೇನು ಹುಟ್ಟಿಯನ್ನು ತೆಗೆದುಕೊಂಡು ಒಂದು ಪಕ್ಕದ ಮನೆಗಳ ಮೂಲಕ ಇನ್ನೊಂದು ಕಡೆಯಿರುವ ಪ್ರಕಾಶಮಾನವಾದ ಬೆಳಕನ್ನು ನೋಡಬಹುದು. ಅಷ್ಟು ತೆಳುವಾಗಿರುತ್ತವೆ ಈ ಗೋಡೆಗಳು. ಎರಡೂ ಕಡೆ ಕೆಲಸಮಾಡುವ ಜೇನು ಹುಳುಗಳ ಈ ಸೂಕ್ಷ್ಮ ಅಳತೆ ಪ್ರಮಾಣಗಳನ್ನು ಚೆನ್ನಾಗಿ ತಿಳಿದಿರುವಂತೆ ಕಾಣುತ್ತದೆ. ಇಷ್ಟೆಲ್ಲ ಗಣಿತ ಶಾಸ್ತ್ರ ಜ್ಞಾನ

ಶಿಲ್ಪ ನೈಪುಣ್ಯತೆ, ಈ ಜೇನುಹುಳುಗಳಿಗೆ ಹೇಗೆ ಸೇರಿತು? ಇವೆಲ್ಲಾ ಕೇವಲ ಆಕಸ್ಮಿಕವೆ? ಜೇನು ಹುಳುಗಳಿಗಿರ ಬಹುದಾದ ಬುದ್ಧಿ ಚಾತುರ್ಯವೆ? ಸುಪ್ರಸಿದ್ಧ ಕೀಟ ಶಾಸ್ತ್ರ ವಿಜ್ಞಾನಿಗಳಲ್ಲಿ ಕೆಲವರು ಒಂದುವಾದವನ್ನು ಇನ್ನು ಕೆಲವರು ಮತ್ತೊಂದು ವಾದವನ್ನೂ ಸಮರ್ಥಿಸಿದ್ದಾರೆ. ಅವುಗಳ ತರ್ಕವೆ ಒಂದು ದೊಡ್ಡ ಗ್ರಂಥವಾಗುತ್ತದೆ.

ಈ ಗಣಿತ ರೇಖಾ ಶಾಸ್ತ್ರ ಪ್ರಾವೀಣತೆಯ ಜಟಿಲ ಸಮಸ್ಯೆ ಹಾಗಿರಲಿ. ಸಾವಿರಾರು ಕುಶಲ ಕಲೆಗಾರರು ಕಟ್ಟುತ್ತಿರುವ, ಅಹೋರಾತ್ರಿ ಬಿಡುವಿಲ್ಲದ ದುಡಿಮೆ ಯಿಂದ ನಿರ್ಮಿತವಾಗುತ್ತಿರುವ ಸುವರ್ಣ ಸೌಧಗಳ ನೂತನ ನಗರವನ್ನು ನೋಡೋಣ: ನಗರ ನಿರ್ಮಾಣ ಬಹಳ ಚುರುಕಿನಿಂದ ನಡೆಯುತ್ತಿದೆ. ಮೊಟ್ಟೆಗಳ ಭಾರ ಹೊತ್ತಿರುವ ರಾಣಿ ಮೊಟ್ಟೆ ಇಡಲು ಚಟಪಟಿಸುತ್ತಿದ್ದಾಳೆ —ಮೊದಲು ಸಾಲುಮನೆಗಳು ಪೂರ್ಣಗೊಳ್ಳುವುದೇ ತಡ ರಾಣಿ ದಾದಿಯರೊಡಗೂಡಿ ಅಂಗರಕ್ಷಕರೊಡನೆ ಈ ಮನೆಗಳ ಸಾಲನ್ನು ಸೇರುತ್ತಾಳೆ. ರಾಣಿ ಜೇನು ಮುಂದಕ್ಕೆ ಬಗ್ಗಿ ಬೆನ್ನನ್ನು ಬಿಲ್ಲಿನಂತೆ ಬಾಗಿಸಿ ತನ್ನ ಉದ್ದನೆಯ ಉದರದ ಕೊನೆಯನ್ನು ಈ ಮನೆಗಳ ಲ್ಲೊಂದರೊಳಕ್ಕೆ ಸೇರಿಸುತ್ತದೆ. ಸ್ವಲ್ಪ ಭಾವೋದ್ರೇಕ ಗೊಂಡ ದಾದಿಯರು, ವೈಗಾವಲಿನವರು ರಾಣಿಯ ಸುತ್ತ ನಿಂತು ಅವಳ ರೆಕ್ಕೆಗಳನ್ನು ಸವರಿ ಮುದ್ದಿಸು ತ್ತಾರೆ. ಬಿಡುಗಣ್ಣರಾಗಿ ಕುತೂಹಲದಿಂದ ರಾಣಿಯನ್ನೆ

ನೋಡುತ್ತಾರೆ. ರಾಣಿಯನ್ನು ಅಭಿನಂದಿಸಲೊ ಇಲ್ಲವೆ ಹುರಿದುಂಬಿಸಲೊ ತಮ್ಮ ಆಘ್ರಾಣ ಶಲಾಕೆಗಳನ್ನು ಕುಣಿಸುತ್ತಾರೆ. ಮೊಟ್ಟೆ ಇಡುವಾಗ ಪ್ರಸವವೇದನೆಯಿಂದ ರಾಣಿಯ ಮೈಯಲ್ಲಿ ಸ್ವಲ್ಪ ನಡುಕ ಉಂಟಾಗುತ್ತೆ. ಆಗ ದಾದಿಯರಲ್ಲಿ ಒಬ್ಬಳು ಮುಂದೆ ಬಂದು ರಾಣಿಯ ತಲೆಗೆ ತನ್ನ ತಲೆಯನ್ನು ಸೇರಿಸಿ ರಾಣಿಯನ್ನು ತಬ್ಬಿಕೊಳ್ಳುತ್ತಾಳೆ. ಆದರೆ ರಾಣಿ ಪ್ರಸವ ವೇದನೆಯಿಂದ ಚಡಪಡಿಸುವಂತೆ ತೋರದೆ ತುಂಬು ಸಂತಸದ ಪವಿತ್ರ ಕರ್ತವ್ಯವನ್ನು ನೆರವೇರಿಸುವಂತೆ ತೋರುತ್ತಾಳೆ. ಕೆಲವು ಕ್ಷಣಗಳ ನಂತರ ರಾಣಿ ಸುಖವಾಗಿ ಮೇಲಕ್ಕೆದ್ದು ಒಂದು ಹೆಜ್ಜೆ ಹಿಂದಕ್ಕೆ ನಡೆದು ಸ್ವಲ್ಪ ಮೈಮುರಿದು ಮುಂದಿನ ಮನೆಗೆ ಹೊಗುತ್ತಾಳೆ. ಮುಂದಿನ ಮನೆಯನ್ನು ಸೇರಿ ಮೊದಲು ಒಳಗೆ ಇಣಕಿ ನೋಡುತ್ತಾಳೆ. ಮೊಟ್ಟೆ ಇಡಲು ಈ ಮನೆಯಲ್ಲಿ ಎಲ್ಲಾ ವ್ಯವಸ್ಥೆಯು ಸರಿಯಾಗಿದೆಯೆ? ಎಂದು ಪರೀಕ್ಷಿಸಲಿರಬಹುದು. ಒಂದೆ ಮನೆಯಲ್ಲಿ ಎರಡು ಮೊಟ್ಟೆಗಳನ್ನು ಇಡದಂತೆ ಇರುವ ಎಚ್ಚರಿಕೆ ಇರಬಹುದು. ರಾಣಿಯು ಈ ಪರೀಕ್ಷೆಯಲ್ಲಿರುವಾಗ ಎರಡು ಮೂರು ಮೈಗಾವಲಿನ ಕೆಲಸಗಾತಿಯರು ರಾಣಿಯು ಮೊಟ್ಟೆ ಇಟ್ಟು ಬಂದ ಮನೆಯಲ್ಲಿ ಪ್ರವೇಶಿಸಿ ಮೊಟ್ಟೆಯು ಸರಿಯಾದ ಸ್ಥಳದಲ್ಲಿ ಸುಖವಾಗಿ ಇದೆಯೇ ಎಂದು ಪರೀಕ್ಷಿಸಿ ಬರುತ್ತವೆ. ಇಂದಿನಿಂದ ಹಗಲು ರಾತ್ರಿ ಎನ್ನದೆ, ನಿದ್ರಾಹಾರದ ಕಾಲವೆನ್ನದೆ ರಾಣಿ

ಒಂದು ಕಡೆಯಿಂದ ಮೊಟ್ಟೆಇಡುತ್ತಾ ಹೋಗುತ್ತಾಳೆ. ರಾಣಿ ಜೇನು ನಿದ್ರೆಯನ್ನೆ ಮಾಡುವುದಿಲ್ಲ ಮತ್ತು ಅವಳು ಮೊಟ್ಟೆಯನ್ನು ಇಡುವ ಕೆಲಸದಲ್ಲಿರುವಾಗಲೇ ದಾದಿಯರು ಅವಳಿಗೆ "ರಾಜರಸ"ವನ್ನು ಉಣಿಸುತ್ತಾರೆ. ಹೀಗೆ ಒಂದು ದಿನಕ್ಕೆ ನೂರಾರು ಸಾರಿ ರಾಣಿಗೆ ಆಹಾರವನ್ನು ಕೊಡುತ್ತಾರೆ. ರಾಣಿಯು ಬಿಡುವಿಲ್ಲದ ಮೊಟ್ಟೆಯನ್ನಿಡುವ ಕಾರ್ಯದಲಿ ಸಹಾಯ ಮಾಡಲು ಕೆಲಸ ಗಾತಿಯರು ಹೆಚ್ಚು ಹೆಚ್ಚು ಮನೆಗಳನ್ನು ಕಟ್ಟುತ್ತಾ ಹೋಗುತ್ತಾರೆ. ಮೊಟ್ಟೆಗಳಿಗಾಗಿ ಕಟ್ಟಿದ ನಗರವಲ್ಲಿರುವ ಮನೆಗಳಲ್ಲೆಲ್ಲಾ ಮೊಟ್ಟೆಗಳನ್ನು ಒಂದು ಸಾರಿ ಇಟ್ಟು ಮುಗಿದ ಮೇಲೆ ತಾನು ಮೊದಲು ಮೊಟ್ಟೆಯಿಟ್ಟ ಮನೆಗೆ ರಾಣಿ ಪರಿವಾರ ಕೂಡಿ ಬರುತ್ತಾಳೆ. ಎಂದರೆ ಸುಮಾರು ೨೨-೨೫ ದಿನಗಳನಂತರ ಬರುತ್ತಾಳೆ. ಈ ಸಮಯಕ್ಕಾಗಲೇ ಈ ಮನೆಯ ಮೊಟ್ಟೆ ಮರಿಯಾಗಿ ಹೊರಬಂದು ಮತ್ತೊಮ್ಮೆ ಪ್ರಸೂತ ಗೃಹವಾಗಲು ಸಿದ್ಧವಾಗಿರುತ್ತದೆ. ರಾಣಿ ಇಲ್ಲಿಂದ ಪುನಃ ಮೊಟ್ಟೆ ಇಡಲು ಪ್ರಾರಂಭಿಸುತ್ತಾಳೆ. ಅವಳ ಬಿಡುವಿಲ್ಲದ ಈ ಪವಿತ್ರ ಕಾರ್ಯ ಸುಗಮವಾಗಿ ನಡೆಯುತ್ತದೆ.

ಇತ್ತ ಕೆಲಸಗಾತಿಯರು ರಾಣಿಯನ್ನು ಅವಳ ಪರಿವಾರದೊಂದಿಗೆ ಮೊಟ್ಟೆ ಇಡುವ ಕೆಲಸದಲ್ಲಿ ಬಿಟ್ಟು ಪುಷ್ಪ ಪರಾಗ ಮಕರಂದವನ್ನು ತಂದು ಉಗ್ರಾಣಗಳಲ್ಲಿ ತುಂಬುವ ಕೆಲಸವನ್ನು ಬಿಡುವಿಲ್ಲದೆ ಮಾಡುತ್ತಾರೆ.

ಒಂದೊಂದು ಸಾರಿ ರಾಣಿಜೇನು ತಾನು ಮೊದಲು ಮೊಟ್ಟೆ ಇಟ್ಟ ಮನೆಗೆ ಹೋಗುವ ಕಾಲ ಇನ್ನೂ ಸಮಾಪಿಸದೆ ಇದ್ದಾಗ ಮೊಟ್ಟೆ ಇಡಲು ಜಾಗವಿಲ್ಲವಾಗಿ ರಾಣಿ ಪುಷ್ಪಪರಾಗ ಮಕರಂದಗಳಿರುವ ಕಡೆ ಬರುತ್ತಾಳೆ. ಆಗ ಇಷ್ಟವಿಲ್ಲದಿದ್ದರೂ ಕೆಲಸಗಾತಿ ಜೇನುಗಳು ಈ ಮನೆಗಳಲ್ಲಿ ತುಂಬಿರುವ ಭಂಡಾರವನ್ನು ಹೊರ ತೆಗೆದು ರಾಣಿ ಮೊಟ್ಟೆಯನ್ನಿಡಲು ಸ್ಥಳಾವಕಾಶ ಮಾಡಿ ಕೊಡಬೇಕಾಗುತ್ತದೆ. ಹೀಗೆ ತೆರವುಮಾಡುವ ಮನೆಗಳು ಬಹಳ ಹೆಚ್ಚಿನ ಸಂಖ್ಯೆಯಲ್ಲಿದ್ದರೆ ಸುಲಭವಾಗಿ ಬೇಗ ರಚಿಸಬಹುದಾದ ಎರಡನೆ ಬಗೆಯ—ಗಂಡು ಹುಳುಗಳ ದೊಡ್ಡ ಗೂಡುಗಳನ್ನು ರಚಿಸಿಕೊಡುತ್ತವೆ. ಆದರೆ ಉಂಡುಮೆರೆಯುವ ಈ ಗಂಡು ಸಂತಾನವನ್ನು ಇತಿಮಿತಿ ಇಲ್ಲದೆ ವೃದ್ಧಿಗೊಳಿಸಲು ಇಷ್ಟವಿಲ್ಲದ ರಾಣಿ ಕೆಲವಾರು ಮೊಟ್ಟೆಗಳನ್ನು ಈ ಗೂಡುಗಳಲ್ಲಿಟ್ಟು ಬೇಜಾರಗೊಂಡು ಕೆಲಸಗಾತಿಯರೇ ಹುಟ್ಟುವ ಸಣ್ಣ ಮನೆಗಳಿಗಾಗಿ ಕಾತರಿಸುತ್ತಾಳೆ. ಆಗ ಕೆಲಸಗಾತಿಯರು ಸ್ವಲ್ಪಸ್ವಲ್ಪ ವಾಗಿ ಈ ಸಣ್ಣ ಮನೆಗಳನ್ನು ತೆರವು ಮಾಡಿ ಮತ್ತು ಬೇಗ ಬೇಗ ಕಟ್ಟಿಕೊಡುತ್ತಾರೆ. ರಾಣಿ ಮೊದಲು ಮೊಟ್ಟೆ ಇಟ್ಟ ಮನೆ ಖಾಲಿಯಾಗುವವರೆಗೆ ಈ ಸಣ್ಣ ಮನೆಗಳ ನಿರ್ಮಾಣಕಾರ್ಯ ನಡೆಯುತ್ತದೆ. ಮೊಟ್ಟೆ ಇಡುವ ಈ ಪವಿತ್ರ ನಿಯೋಗದ ಹೊರೆ ಹೊತ್ತ ರಾಣಿ ಕೆಲಸಗಾತಿ ಜೇನುಗಳಿರುವ ಕಡೆ ಧಾವಿಸಿದಾಕ್ಷಣ ಎಲ್ಲ ಕೆಲಸಗಾತಿ

ಯರು ರಾಣಿಯ ಕಡೆ ಮುಖ ತಿರುಗಿಸಿ ಹಿಂದುಹಿಂದಕ್ಕೆ ನಡೆಯುತ್ತಾರೆ. ರಾಣಿಯ ಕಡೆ ಬೆನ್ನು ತಿರುಗಿಸುವುದಿಲ್ಲ. ಇದು ತಮ್ಮ ರಾಣಿಗೆ ಅರ್ಪಿಸುವ ರಾಜಗೌರವವಿರ ಬಹುದು. ಜೇನುಗಳು ತಮ್ಮ ಬಿಡುವಿಲ್ಲದ ದುಡಿಮೆ ಯಿಂದ ಸಕಲೈಶ್ವರ್ಯಸಂಪತ್ತಿನಿಂದ ಕೂಡಿದ ನೂತನ ನಗರವನ್ನು ರಚಿಸುತ್ತವೆ. ಜೇನುಹುಳುಗಳ ಪ್ರಜಾ ಪ್ರಭುತ್ವದ ಸುವ್ಯವಸ್ಥಿತ ಶಾಸನ ಶಾಸ್ತ್ರಗಳು, ಕಟ್ಟು ನಿಬಂಧನೆಗಳು ಮಾನವನ ಮತಿಗೆ ದಿಗ್ಭ್ರಮೆ ಹಿಡಿಸುವ ಜಟಿಲ ಸಮಸ್ಯೆಯಾಗಿವೆ

## ರಾಜಕುಮಾರಿಯರು

ಈ ನೂತನ ನಗರವು ಬೆಳೆದು ಸಮೃದ್ಧಿಯಿಂದ ಕೂಡಿ ಮೊಟ್ಟೆ ಮರಿಗಳೊಡನೆ ತುಂಬಿ ತುಳುಕುವಾಗ ಉತ್ತರಾಧಿ ಕಾರಿ ರಾಜಕುಮಾರಿಯರನ್ನು ನಿರ್ಮಿಸಿ ಜೇನುಹುಳುಗಳ ಹಿಂಡು ನಗರವನ್ನು ತ್ಯಾಗಮಾಡುತ್ತದೆ.

ಈ ತ್ಯಾಗಿಗಳು ಬಿಟ್ಟು ಬಂದ ಅಲಕಾವತಿಯಲ್ಲಿ ನಗರ ವನ್ನು ಬಿಡುವಾಗ ಇದ್ದ ಗಡಿಬಿಡಿ, ಗಜಿಬಿಜಿ ಅಡಗಿದೆ. ಈ ನತವೃಷ್ಟನಗರ ಪ್ರಜಾಶೂನ್ಯವಾಗಿ ಕಾಣುತ್ತಿದೆ. ರಕ್ತ ಅಳಿದು, ಶಕ್ತಿ ಉಡುಗಿ ಸಾವಿನತ್ತ ನೋಡುವ ಶರೀರದಂತೆ ಚೈತನ್ಯಹೀನವಾಗಿ ತೋರುತ್ತಿದೆ. ಕೆಲವು

ಸಾವಿರ ಜೇನುಗಳು ಭಾವೀ ಪ್ರಜೆಗಳ ಪಾಲನೆಗೆ, ನಗರದ ರಕ್ಷಣೆಗೆ ಈ ನಗರದಲ್ಲೆ ನಿಂತಿವೆ. ಇವುಗಳಲ್ಲಿ ಹುಮ್ಮಸ್ಸು ಉಡುಗಿದ್ದಾಗ್ಯೂ ಬಳಗದ ಉದ್ಧಾರ ದೃಷ್ಟಿಯಿಂದ ಬಿಡುವಿಲ್ಲದೆ ದುಡಿಯುತ್ತಿವೆ. ನಗರವನ್ನು ಬಿಟ್ಟು ಹೋದ ೬೦-೭೦ ಸಾವಿರ ಜೇನುಗಳು ಕೆಲಸವನ್ನು ತಮ್ಮೊಳಗೆ ಹಂಚಿಕೊಂಡು ನಗರದ ಹಿತಕ್ಕೆ ಚ್ಯುತಿಬಾರದಂತೆ ವ್ಯವಸ್ಥೆ ಮಾಡಿಕೊಂಡು ಕೆಲಸ ಮಾಡುತ್ತವೆ. ಒಂದು ಗುಂಪು ನಗರ ರಕ್ಷಣೆಯ ಕೆಲಸದಲ್ಲಿ, ಇನ್ನೊಂದು ನಗರ ನೈರ್ಮಲ್ಯ ಕಾರ್ಯದಲ್ಲಿ, ಮತ್ತೊಂದು ರಾಜಕುಮಾರಿಯರ, ಮರಿಗಳ, ಪಾಲನೆಯಲ್ಲಿ ನಿರುತರಾಗಿದ್ದರೆ ಮಗುದೊಂದು ಗುಂಪು ಪುಷ್ಪಪರಾಗ ಮಕರಂದಗಳನ್ನು ಹೊತ್ತು ತರಲು ಹೂ ಹೊಲಗಳಿಗೆ ಹೋಗಿ ಬರುತ್ತದೆ.

ಒಂದು ಹಿಂಡು ಭಾವೀ ಜನಾಂಗದ ಹಿತಕ್ಕಾಗಿ ನಗರವನ್ನು ಬಿಟ್ಟು ಹೋದಾಕ್ಷಣದಲ್ಲಿ ನಗರ ನಿರ್ಜೀವವಾಗಿ ಕಾಣುತ್ತದೆ. ಆದರೆ ಉನ್ನತಿಯ ಆಸೆ ಅನಂತವಾಗಿ ಹಬ್ಬಿದೆ. ಮಧು, ಪರಾಗ ಭಂಡಾರಗಳು ತುಂಬಿ ತುಳುಕುತ್ತಿವೆ. ಮುಚ್ಚಿ ಮುಪ್ಪರಿಗೊತ್ತಿದ ಅನೇಕ ದಶ ಸಹಸ್ರ ಸುವರ್ಣ ತೊಟ್ಟಿಲುಗಳಲ್ಲಿ ಮರಿಗಳು ಮಲಗಿವೆ. ತಲೆ ತಗ್ಗಿಸಿಕೊಂಡು, ಕೈಮಡಚಿಕೊಂಡು ಪಾರದರ್ಶಕ ತೊಟ್ಟಿಲುಗಳಲ್ಲಿ ಮಲಗಿರುವ ಹಾಲು ಬಿಳಿಯ ಸಾವಿರಾರು ಹುಳುಗಳು ಸುತ್ತ ಎಚ್ಚೆತ್ತ ಜಗತ್ತು ತಮ್ಮನ್ನು ಎಚ್ಚರಿಸುವುದನ್ನೆ ಕಾಯುತ್ತಿವೆ. ಹೀಗೆ ನಿದ್ರಿಸುವ ಈ ನಗರ

ಜಲ್ಲಿ ಎತ್ತೆತ್ತಲೂ ಜೀವ ಎಚ್ಚೆತ್ತು ಸುಂದರ ಪ್ರಪಂಚ ವನ್ನು ನೋಡಲು ಕಾತರಿಸುತ್ತದೆ.

ನಿದ್ರಿಸುತ್ತಿರುವ ಈ ನಗರದಲ್ಲಿ ನೂರಾರು ಕೆಲಸಗಾರ ಜೇನುಗಳು ರೆಕ್ಕೆಗಳನ್ನು ಬೀಸುತ್ತ ರಾಗಲಯತಾಳ ಬದ್ಧವಾಗಿ ಒಂದು ವಿಶೇಷ ಭಂಗಿಯಲ್ಲಿ ನರ್ತಿಸುತ್ತವೆ. ಸಾಕಾದಷ್ಟು ಶಾಖವನ್ನು ಉತ್ಪತ್ತಿಮಾಡಲು ಹೀಗೆ ನರ್ತಿಸುತ್ತಿರಬಹುದು. ಇಲ್ಲವೆ ಹೊಸ ಮರಿಗಳನ್ನು ಸ್ವಾಗತಿಸುವ ನಾಟ್ಯವಿರಬಹುದು.

ಕೆಲವು ದಿನಗಳಲ್ಲಿ ದಶ ಸಹಸ್ರ ಸಂಖ್ಯೆಗಳಲ್ಲಿರುವ ತೊಟ್ಟಿಲುಗಳ ಮುಚ್ಚಳಗಳು ತೆರೆಯಲು ಪ್ರಾರಂಭ ವಾಗುತ್ತವೆ. ತೊಟ್ಟಿಲ ಬಾಗಿಲು ತೆರೆದು ಎರಡು ಭೂತ ಕಣ್ಣುಗಳು ಹೊರಗೆ ಇಣಕುತ್ತವೆ. ತಲೆಯ ಮುಂದಿರುವ ಆಘ್ರಾಣ ಶಲಾಕೆಗಳು ಕುಣಿಯುತ್ತವೆ. ಈ ಹೊಸ ಹೊಚ್ಚ ಮರಿಯ ದವಡೆಗಳು ಬಾಗಿಲನ್ನು ವಿಶಾಲಗೊಳಿ ಸುವ ಕೆಲಸದಲ್ಲಿ ತೊಡಗುತ್ತವೆ. ಆಗ ದಾದಿಯರು ಓಡಿ ಬಂದು ಈ ಮರಿಜೇನು ಹೊರಬರಲು ಸಹಾಯ ಮಾಡಿ ಮರಿಜೇನಿನ ಮೈಯನ್ನು ಚೊಕ್ಕಟಗೊಳಿಸಿ ತಮ್ಮ ನಾಲಿಗೆಯ ತುದಿಯಿಂದ ಮಕರಂದವನ್ನು ಉಣಿಸು ತ್ತವೆ. ಈ ಹೊಸ ಲೋಕಕ್ಕೆ ಕಾಲಿಟ್ಟ ಮರಿಜೇನು ಕಕ್ಕಾಬಿಕ್ಕಿಯಾಗಿ ನಡಗುತ್ತ ಬಿಳಿಚಿದ ರಕ್ತಹೀನ ಮುದಿ ಯಂತೆ ಕಾಣುತ್ತದೆ. ಗೂಡಿನಿಂದ ಹೊರಬರುವ ಈ ಮರಿಜೇನುಗಳು ಸರ್ವಾಂಗ ಸಂಪೂರ್ಣವಾಗಿರುತ್ತವೆ.

ಜೇನುಮರಿ ಜೀವ ಪಡೆಯುತ್ತಲೇ ಈ ಲೋಕದಲ್ಲಿ ತಾನು ಮಾಡಬೇಕಾದ ಕೆಲಸಗಳನ್ನೆಲ್ಲಾ ತಿಳಿದಿರುತ್ತದೆ. ಮಾನವನ ಮಕ್ಕಳಂತೆ ಲಾಲನೆ ಪಾಲನೆ ಪಡೆದು, ಆಡಿ, ಅತ್ತು, ನಕ್ಕು ತನ್ನ ಕರ್ತವ್ಯ ಕಲಿಯಲು ಕಾಲಾವಕಾಶ ವಿಲ್ಲ. ಗೂಡಿನಿಂದ ಹೊರಬಂದು ಸ್ವಲ್ಪ ಸುಧಾರಿಸಿ ಕೊಂಡು ಬೇರೆ ಕೆಲಸಗಾರ ಜೇನುಗಳ ಸಂಗಡ ಸೇರಿ ಇನ್ನೂ ಬಾಗಿಲು ಮುಚ್ಚಿರುವ ಗೂಡಿನ ಹತ್ತಿರ ಹೋಗಿ ತಾನೂ ರೆಕ್ಕೆಗಳನ್ನು ಬಡಿದು ಸ್ವರರಾಗಲಯ ತಾಳ ಬದ್ಧವಾಗಿ ಕುಣಿದು ಇನ್ನೂ ಮಲಗಿರುವ ತನ್ನ ಜೊತೆ ಗಾರ ಜೇನುಗಳು ಹೊರಬರಲು ಸಹಾಯಮಾಡು ತ್ತದೆ.

ಈ ಮರಿಜೇನುಗಳು ಮೊದ ಮೊದಲು ಪ್ರಯಾಸಕರ ವಾದ ಕೆಲಸಗಳನ್ನು ಮಾಡುವುದಿಲ್ಲ. ಜನ್ಮತಾಳಿದ ಒಂದು ವಾರದ ನಂತರ ನಗರವನ್ನು ಬಿಟ್ಟು ಹೊರಗೆ ಹೊರಟು ಜಗತ್ತಿನ ಬೆಳಕು ಕಂಡು ಗಾಳಿಯಲ್ಲಿ ಹಾರಿ ತಮ್ಮ ಶರೀರದ ವಾಯುನಾಳಗಳಲ್ಲಿ ಗಾಳಿಯನ್ನು ತುಂಬಿ ಕೊಂಡು ಸ್ವಲ್ಪ ಉಬ್ಬಿಕೊಳ್ಳುತ್ತವೆ. ಸ್ವಲ್ಪ ಹೊತ್ತಿನ ನಂತರ ನಗರಕ್ಕೆ ಹಿಂದಿರುಗಿ ಇನ್ನೂ ಕೆಲವು ದಿನ ಮನೆ ಯಲ್ಲಿಯೇ ಕೆಲಸಗಳನ್ನು ಮಾಡುತ್ತವೆ—ತಾನು ಹುಟ್ಟಿ ಹೊರಬಂದ ತೊಟ್ಟಿಲನ್ನು ಶುಚಿಗೊಳಿಸುವ ಕೆಲಸವನ್ನು ತಾನು ಹುಟ್ಟಿ ಹೊರಗೆ ಬಂದಗಳಿಗೆಯಿಂದ ಪ್ರಾರಂಭಿಸಿ ಗೂಡಿನಿಂದ ಮರಿಗಳು ಹೊರಬರಲು ಸಹಾಯ ಮಾಡು

ತ್ತದೆ. ನಾಲ್ಕನೆಯ ದಿನದಿಂದ ತನ್ನ ಆಹಾರವನ್ನು ತಾನೇ ತೆಗೆದುಕೊಳ್ಳಲು ಮೊದಲುಮಾಡಿ ಕೋಶಾವಸ್ಥೆಯ ಕಡೆ ಕಾಲಿಡುತ್ತಿರುವ ಹುಳುಗಳಿಗೆ ದಾದಿಯಾಗಿ, ನಂತರ ಎಳೆಯ ಮರಿಗಳ ದಾದಿಯ ಕೆಲಸ ಮಾಡುತ್ತವೆ. ನಾಲ್ಕಾರು ದಿನ ಈ ಕೆಲಸಮಾಡಿ ಕಟ್ಟಡಕ್ಕೆ ಮೇಣವನ್ನೊದಗಿಸುವ ಕೆಲಸ, ಪುಷ್ಪಪರಾಗಗಳನ್ನು ಮನೆಗೆ ಹೊತ್ತು ತಂದ ಕೆಲಸಗಾತಿಯರನ್ನು ಬಾಗಿಲಲ್ಲಿ ಎದುರುಗೊಂಡು ಅವುಗಳು ತಂದ ಹೊರೆಯನ್ನು ತೆಗೆದುಕೊಂಡು ಹೋಗಿ ಉಗ್ರಾಣಗಳಲ್ಲಿ ಇಡುವ, ಮನೆಯನ್ನು ಶುಚಿಗೊಳಿಸುವ, ನಗರದಲ್ಲಿ ಕಾವಲು ಕಾಯುವ ಕೆಲಸಗಳನ್ನು ಮನೆಯಲ್ಲಿ ನಿರ್ವಹಿಸಿ ನಂತರ ಪುಷ್ಪಪರಾಗ, ಮಕರಂದ ಕ್ರೀಡೆಗೆ ಹೊರಡುತ್ತವೆ. ಕತ್ತಲಿನಲ್ಲಿ ಬೆಳೆದ ಈ ಮರಿಜೇನುಗಳು ಬಿಸಿಲಿನಲ್ಲಿ ಪುಷ್ಪಪರಾಗ ಪರ್ಯಟನಕ್ಕೆ ಹಾರಲು ಸ್ವಲ್ಪ ಹೆದರುವಂತೆ ತೋರುತ್ತದೆ. ನಗರದಿಂದ ಹೊರಕ್ಕೆ ಹೊರಟು ಹೂವಿನತ್ತ ಹೋಗದೆ ಹಿಂದಿರುಗುತ್ತವೆ. ಹೀಗೆ ಹತ್ತಿಪ್ಪತ್ತು ಸಾರಿ ಸುತ್ತಿ ತುಂಬ ಎತ್ತರಕ್ಕೆ ಹಾರಿ ಒಂದೇ ಕಡೆ ಹಾರುತ್ತ ತಮ್ಮ ನಗರದ ಕಡೆಯೇ ನೋಡುತ್ತ ತಮ್ಮ ಹದಿಮೂರು ಸಾವಿರ ಸಂಯುಕ್ತ ನೇತ್ರಗಳಿಂದ ತಮ್ಮ ನಗರದ ಸುತ್ತ ಮುತ್ತಲ ಪ್ರದೇಶವನ್ನೂ, ನಗರ ದ್ವಾರವನ್ನೂ ತಮ್ಮ ಚಿತ್ತದಲ್ಲಿ ಚಿರಗೊಳಿಸಿಕೊಂಡು ನಂತರ ಪುಷ್ಪಪರಾಗ, ಮಕರಂದವನ್ನು ಹೊತ್ತು ತರಲು ಕಾಡು ಮೇಡುಗಳ ಮೇಲೆ ಹಾರಿ

ಹೋಗುತ್ತವೆ. ತಾವು ನಗರದಿಂದ ಹಾರಿ ಹೋಗುವಾಗ ಅಂತರಿಕ್ಷದಲ್ಲಿ ಅಳಿಸಲಾಗದ ಹೆಜ್ಜೆಯ ಗುರುತುಗಳನ್ನು ಬಿಟ್ಟು ಎರಡು ನೂರು ಮೈಲಿ ದೂರದ ಅಪರಿಚಿತ ಸ್ಥಳಗಳಿಗೆ ಹೋಗಿ ಹಿಂದಿನ ಹೆಜ್ಜೆಯನ್ನೆ ಅನುಸರಿಸಿ ಬಂದಂತೆ, ಬಂಡುಂಡು ತಮ್ಮ ನಗರಕ್ಕೆ ಬಂದು ಸೇರುತ್ತವೆ.

ಮುಚ್ಚಿ ಮುದ್ರೆಯೊತ್ತಿದ್ದ ಸಾವಿರಾರು ತೊಟ್ಟಿಲುಗಳು ತೆರವಿಲ್ಲದೆ ತೆರೆಯುತ್ತವೆ. ನಗರದ ಮನೆಗಳೆಲ್ಲಾ ಜೀವ ಪಡೆದು ಓಡಾಡುವಂತೆ ತೋರುತ್ತದೆ. ಆದರೆ ಈ ನಗರಕ್ಕೆ ಇನ್ನೂ ರಾಣಿಯೊಬ್ಬಳು ಇಲ್ಲವಾಗಿದೆ. ಒಂದು ಜೇನು ಹುಟ್ಟಿಯ ಮಧ್ಯದಲ್ಲಿ ವಿಚಿತ್ರ ರೀತಿಯ ಏಳೆಂಟು ಗೂಡುಗಳು ಕುತೂಹಲವನ್ನು ಕೆರಳಿಸುತ್ತವೆ. ಈ ವಿಶೇಷ ರೀತಿಯ ಗೂಡುಗಳು ಜೇನು ಹುಟ್ಟಿಯ ಮೇಲೆ ಎದ್ದು ಕಾಣುತ್ತವೆ. ಸುಕ್ಕು ಸುಕ್ಕಾದ ಮೇಣದ ಪೊರೆಯಿಂದ ನಿರ್ಮಿತವಾದ ಉಬ್ಬಿ ಬಾಗಿದ ಗ್ರಂಥಿಗಳಂತಿರುವ ಮುಚ್ಚಿ ಮುದ್ರೆಯೊತ್ತಿರುವ ಈ ವಿಶೇಷ ಜಾತಿಯ ಕೋಶಗಳು ರಾಜಕುಮಾರಿಯರು ಮಲಗಿರುವ ಸುವರ್ಣ ವರ್ಣ ಮಂದಿರಗಳು–ಕೆಲವು ಜಾತಿಯ ಜೇನುಹುಳುಗಳು ರಾಜಕುಮಾರಿಯರು ಜನ್ಮತಾಳುವ ಈ ವಿಶೇಷ ಜಾತಿಯ ಗೂಡುಗಳನ್ನು ಸಾಮಾನ್ಯವಾಗಿ ಹುಟ್ಟಿಯ ಕೆಳಬದಿಯ ಅಂಚಿನಲ್ಲಿ ಕಟ್ಟುತ್ತವೆ. ರಾಜಕುಮಾರಿಯರು ಮಲಗಿರುವ ಈ ವಿಶೇಷ ಜಾತಿಯ ಗೂಡುಗಳನ್ನು ರಕ್ಷಣಾದಳದ ಒಂದು ದೊಡ್ಡದಳ ಅಹೋರಾತ್ರಿ ಎಚ್ಚರಿಕೆಯಿಂದ

ಕಾವಲು ಕಾಯುತ್ತಿರುತ್ತದೆ. ನಗರದ ಭಾವಿರಾಣಿ ಜನ್ಮ ತಾಳುವುದು ಈ ಕೋಶಗಳಿಂದಲೆ. ಹುಳುಗಳ ಹಿಂಡು ನಗರವನ್ನು ಬಿಡುವ ಮೊದಲು ರಾಣಿ ಜೇನು ಈ ಕೋಶಗಳಲ್ಲಿ ಮೊಟ್ಟೆಗಳನ್ನು ಇಟ್ಟು ಹೋಗಿರಬಹುದು—ಇಲ್ಲವೆ ಕೆಲಸಗಾರ ಜೇನುಗಳು ಕೆಲಸಗಾತಿ ಜೇನುಗಳು ಜನ್ಮ ಪಡೆಯುವ ಗೂಡಿನಲ್ಲಿರುವ ಮೊಟ್ಟೆಗಳನ್ನು ತಂದು ಇಟ್ಟಿರಬಹುದು ಈ ಮೊಟ್ಟೆಗಳು ಕೆಲಸಗಾತಿ ಜೇನುಗಳಿಗೆ ಜೀವ ಕೊಡುವ ಮೊಟ್ಟೆಯಂತೆಯೇ ಇರುತ್ತವೆ.

ಮೂರು ದಿನಗಳ ನಂತರ ಈ ಮೊಟ್ಟೆಗಳಿಂದ ಮರಿಗಳು ಹೊರಗೆ ಬರುತ್ತವೆ. ರಾಣಿಯಾಗುವ ಅದೃಷ್ಟವನ್ನು ಪಡೆದಿರುವ ಈ ಮರಿಗಳು ಪುಷ್ಟಿಕರವಾದ ವಿಶೇಷ ರೀತಿಯ ಆಹಾರವಾದ "ರಾಜರಸ" ವನ್ನು ಸೇವಿಸುತ್ತವೆ. ಈ "ರಾಜರಸ" ಈ ಪಂಗಡಕ್ಕೆ ಮಾತ್ರ ಮೀಸಲು. "ರಾಜರಸ"ವನ್ನು ತಯಾರಿಸುವ ಕಷ್ಟಜೀವಿ ಕೆಲಸಗಾತಿ ಜೇನುಗಳು ಅದರ ರುಚಿಯನ್ನು ಅಷ್ಟು ತಿಳಿಯುವಂತಿಲ್ಲ. ಈ "ರಾಜರಸ"ವನ್ನುಂಡು ದೇಹಧ್ಯೇಯಗಳಲ್ಲಿ ತನ್ನದೇ ಆದ ಒಂದು ತುಂಬು ಬೆಳವಣಿಗೆಯನ್ನು ಪಡೆದು ಬೇರೆ ಕುಲಕ್ಕೆ ಸೇರಿದ ಜೇನುಹುಳುವಾಗಿ ಜನ್ಮತಾಳುತ್ತಾಳೆ—ಜೇನು ಹಿಂಡಿನ ಜೀವ, ಬಳಗದ ಪ್ರೀತಿ ಪ್ರತಿಷ್ಠೆಗಳ ಪ್ರತಿರೂಪ ರಾಣಿ.

ಕೆಲಸಗಾರ ಜೇನುಹುಳುಗಳ ಜೀವಮಾನ ಕೇವಲ ಆರೇಳು ವಾರಗಳಾದರೆ ರಾಣಿಯ ಆಯುಸ್ಸು ಸುಮಾರು

ನಾಲ್ಕೈದು ವರುಷಗಳು, ಕೆಲವು ಕಡೆ ಇನ್ನೂ ಹೆಚ್ಚು. ರಾಣಿಯ ಉದರ ಕೆಲಸಗಾತಿ ಹುಳುಗಳ ಉದರದ ಎರಡರಷ್ಟು ಉದ್ದವಾಗಿರುತ್ತದೆ. ರಾಣಿಯಲ್ಲಿರುವ ವಿಷದ ಮುಳ್ಳು ಕೆಲಸಗಾತಿಯರ ಮುಳ್ಳಿನಂತೆ ನೇರವಾಗಿರದೆ ಬಾಗಿದ ಕತ್ತಿಯಂತಿರುತ್ತದೆ. ಅವಳ ಮೈಬಣ್ಣ ಸ್ವಚ್ಛವಾಗಿ ಬಂಗಾರದ ಬಣ್ಣದ ಕಡೆ ತಿರುಗಿರುತ್ತದೆ. ಅವಳ ಕಣ್ಣುಗಳು ಸಾಮಾನ್ಯ ಜೇನಿನಂತೆ 12–13 ಸಾವಿರ ಮುಖಗಳಿಂದ ಕೂಡಿದ ಸಂಯುಕ್ತ ನೇತ್ರಗಳಾಗಿರದೆ ಕೇವಲ ಏಳೆಂಟು ಸಾವಿರ ಮುಖಗಳಿಂದ ಕೂಡಿದ ಸಂಯುಕ್ತ ನೇತ್ರಗಳಾಗಿರುತ್ತವೆ. ಮೆದಳು ತುಂಬಾ ಚಿಕ್ಕದು. ಆದರೆ ಅಸಂಖ್ಯಾತ ಅಂಡಾಣುಗಳು ರಾಣಿಯ ಹೊಟ್ಟೆಯಲ್ಲಿ ಹುದುಗಿವೆ. ಕಷ್ಟಜೀವಿಗೆ ಸೇರಿದ ಯಾವ ಗುಣವಿಶೇಷಗಳೂ ರಾಣಿಯಲ್ಲಿ ಇರುವುದಿಲ್ಲ. ಮೇಣವನ್ನು ಬಸಿಯುವ ರಂಧ್ರಗಳು, ಪುಷ್ಪಪರಾಗವನ್ನು ಹೊರುವ ಬುಟ್ಟಿಗಳು ಅವಳಲ್ಲಿ ಇರುವುದಿಲ್ಲ. ಜೇನು ಹುಳುಗಳಿಗೆ ಸಾಮಾನ್ಯವಾಗಿ ಇರುವ ಗುಣಗಳೆಂದು ನಾವು ಪರಿಗಣಿಸುವ ರಾಗಭಾವಗಳ ಕೊರತೆ ರಾಣಿ ಜೇನಿನಲ್ಲಿ ಎದ್ದು ಕಾಣುತ್ತದೆ. ತನ್ನ ನಾಲ್ಕೈದು ವರುಷಗಳ ದೀರ್ಘ ಜೀವನದಲ್ಲಿ ಒಂದು ಸಾರಿಯೂ ಹೂಗಳ ಬಂಡುಂಡು ಬರಲು ಹೊರಗೆ ಹೋಗುವುದಿಲ್ಲ. ಆದರೆ ಕೆಲಸಗಾತಿಯರು ಘಂಟೆಗೆ ನೂರಾರು ಪುಷ್ಪಗಳಿಗೆ ಮುತ್ತಿಟ್ಟು ಮಧು, ಪರಾಗ ಹೊತ್ತು ಮನೆಗೆ ಮರಳು

ತ್ತಿರುತ್ತವೆ. ಇದು ಅವುಗಳ ಬಿಡುವಿಲ್ಲದ ಪುಷ್ಪಪರಾಗ ಕ್ರೀಡೆ.

ರಾಣಿಜೇನು ತನ್ನ ಪ್ರಿಯನೊಡನೆ ಸೇರುವಾಗ ಒಮ್ಮೆ ತನ್ನ ಸುವರ್ಣ ನಗರದ ಸರ್ವಸಂಪತನ್ನೂ ತ್ಯಾಗಮಾಡಿ ಹಾರಿಹೋಗುವಾಗ ಒಮ್ಮೆ ಮಾತ್ರ ಗಾಳಿಬೆಳಕನ್ನೂ, ಸೂರ್ಯನ ಶಾಖವನ್ನೂ ಸವಿಯುತ್ತಾಳಲ್ಲದೆ ತನ್ನ ರೆಕ್ಕೆ ಗಳನ್ನು ಉಪಯೋಗಿಸುತ್ತಾಳೆ. ಕೆಲಸಗಾತಿಯರು ನಿರ್ಮಿಸಿದ ತೊಟ್ಟಿಲುಗಳಲ್ಲಿ ಮೊಟ್ಟೆ ಇಡುವುದೊಂದೇ ಅವಳ ಬಿಡುವಿಲ್ಲದ ಕೆಲಸ. ಕೆಲಸಗಾತಿ ಜೇನುಹುಳು ಗಳು ಜನ್ಮಪಡೆಯುವ ಮೊಟ್ಟೆಗಳಿಂದಲೇ ಜನ್ಮವಿತ್ತ ಈ ಜೇನು ಒಂದು ತೊಟ್ಟು "ರಾಜರಸ"ದ ಪ್ರಭಾವದಿಂದ ತನ್ನ ದೇಹ. ಧೈರ್ಯ, ಆಸೆ ಅಭ್ಯಾಸಗಳಲ್ಲಿ ಕೆಲಸಗಾತಿ ಜೇನಿನಿಂದ ಸಂಪೂರ್ಣ ಬೇರೆಯಾಗಿರುವುದು ಎಷ್ಟು ಆಶ್ಚರ್ಯ!

ಹಳೆಯ ರಾಣಿ ತನ್ನ ಹಿಂಡಿನೊಂದಿಗೆ ನಗರ ತ್ಯಾಗ ಮಾಡಿ ಒಂದು ವಾರವಾಗಿದೆ. ರಾಣಿಜೇನಾಗುವ ಪೂರ್ಣ ಬೆಳವಣಿಗೆಯನ್ನು ಪಡೆದಿರುವ ಜೇನು ಮರಿಗಳು ರಾಜಸೌಧಗಳಲ್ಲಿ ಮಲಗಿ ಬೆಳೆಯುತ್ತಿವೆ. ಬಳಗದವರು ಅಪೇಕ್ಷಿಸಬಹುದಾದ ಎರಡು ಮತ್ತು ಮೂರನೆ ಹಿಂಡನ್ನು ನಗರದಿಂದ ಕಳುಹಿಸುವುದಕ್ಕೆ ಅನುಕೂಲವಾಗುವಂತೆ ಒಂದು ರಾಣಿಜೇನು ಪೂರ್ಣ ಬೆಳೆದು ಹೊರಗೆ ಬಂದ ಕೆಲವು ದಿನಗಳ ನಂತರ ಮತ್ತೊಂದು ರಾಣಿ ಜನ್ಮತಾಳು

ವಂತೆ ವಯಸ್ಸಿನ ವ್ಯವಸ್ಥೆಮಾಡಿ ಈ ಮೊಟ್ಟೆಗಳನ್ನಿಟ್ಟಿರು
ತ್ತವೆ. ಒಂದು ವೇಳೆ ಎರಡು ರಾಣಿಜೇನುಗಳು ಏಕ
ಕಾಲದಲ್ಲಿ ಜನ್ಮತಾಳಿದರೆ ಇವುಗಳ ನಡುವೆ ಯುದ್ಧ
ನಡೆದು ಒಂದು ಮಾತ್ರ ಮರಣವನ್ನಪ್ಪುತ್ತದೆ. ಸಾಮಾನ್ಯ
ವಾಗಿ ಇದು ಸಂಭವಿಸುವುದಿಲ್ಲ. ಪೂರ್ಣ ಬೆಳೆದ
ಹಿರಿಯ ರಾಜಕುಮಾರಿ ಇರುವ ಗೂಡಿನ ಮುಚ್ಚಳವನ್ನು
ಕೆಲಸಗಾತಿಯರು ಕೆರೆದು ತೆಗೆಯಲು ಪ್ರಾರಂಭಿಸುತ್ತಾರೆ.
ಪೂರ್ಣ ಬೆಳೆದ ಈ ರಾಜಕುಮಾರಿಯೂ ಸಹ ಬಾಗಿಲನ್ನು
ಮುಚ್ಚಿರುವ ಮೇಣವನ್ನು ಒಳಗಿನಿಂದ ತೋಡಿ ತೆಗೆಯು
ತ್ತಾಳೆ. ಬಾಗಿಲು ಬಿಚ್ಚಿ ರಾಜಕುಮಾರಿ ಹೊರಗೆ ಬರು
ತ್ತಾಳೆ. ದಾದಿಯರು ಬಂದು ಮುದ್ದಿಸಿ, ಮೈಯೊರಸಿ
ರಾಣಿಯನ್ನು ಶುಚಿಗೊಳಿಸುತ್ತಾರೆ. ಇತರ ಜೇನುಮರಿ
ಗಳಂತೆ ರಾಜಕುಮಾರಿಯೂ ಸಹ ಜೀವತಾಳಿದಾಕ್ಷಣದಲ್ಲಿ
ಬಿಳಿಚಿದ ಮೈಹೊತ್ತು ನಡಗುತ್ತ ನಿಂತಿರುತ್ತಾಳೆ. ಹತ್ತು
ಹದಿನೈದು ನಿಮಿಷಗಳಲ್ಲಿ ಶಕ್ತಿ ತುಂಬಿಕೊಂಡು ಜೇನು
ಹುಟ್ಟಿಯ ಮೇಲೆ ಸ್ವಲ್ಪ ನಡೆಯುತ್ತಾಳೆ. ಕ್ಷಣಮಾತ್ರ
ದಲ್ಲಿ ಒಂದು ವಿಚಿತ್ರ ಅಶಾಂತಿ ಈ ರಾಜಕುಮಾರಿಯನ್ನು
ಆವರಿಸುತ್ತದೆ. ಆವಳಿಗೆ ಠಕ್ಕು ಹಕ್ಕುದಾರರೆಂದು
ತೋರುವ ನಿದ್ರಿಸುತ್ತಿರುವ ಇತರ ರಾಜಕುಮಾರಿಯರ
ಮೇಲೆ ಸಿಟ್ಟು ಹೆಚ್ಚುತ್ತದೆ. ಈ ವಿರೋಧಿಗಳನ್ನು
ಅಡಗಿಸಲು ರಾಜಸೌಧಗಳತ್ತ ರೋಷದಿಂದ ನುಗ್ಗು
ತ್ತಾಳೆ. ರಕ್ಷಣಾದಳದವರು ದಾರಿಬಿಟ್ಟು ಅಸೂಯೆಯ

ಕ್ರೋಧಧ್ವನಿಯನ್ನು ಕೇಳುತ್ತಾ ನಿಲ್ಲುತ್ತಾರೆ. ತನ್ನ ದಾರಿಯಲ್ಲಿ ಮೊದಲು ಸಿಕ್ಕ ರಾಜಕುಮಾರಿಯು ಮಲಗಿರುವ ಗೂಡನ್ನು ಕಿತ್ತು ಹರಿದು ಏನೂ ಅರಿಯದ ರಾಜಕುಮಾರಿಯನ್ನು ಹಿಡಿದೆಳೆದು ಬಾಗಿದ ಕತ್ತಿಯಂತಿರುವ ತನ್ನ ವಿಷದ ಮುಳ್ಳಿನಿಂದ ತಿವಿದು ಕೊಂದು ಶಾಂತಳಾಗುತ್ತಾಳೆ. ಅಲ್ಲಿಂದ ಪಕ್ಕದ ರಾಜಕುಮಾರಿಯರ ಗೂಡುಗಳ ಮೇಲೆ ಬಿದ್ದು ಅವುಗಳನ್ನು ಕೊಂದುಹಾಕುತ್ತಾಳೆ. ಸುತ್ತಮುತ್ತಲಿರುವ ಜೇನುಹುಳುಗಳು ಪ್ರಳಯ ದುಂದುಭಿಯನ್ನು ಕೇಳುತ್ತ ರುದ್ರ ನಾಟಕವನ್ನು ನೋಡುತ್ತಾ ನಿಂತಿರುತ್ತವೆ. ಒಬ್ಬ ರಾಜಕುವರಿಯ ಕೊಲೆಯಾದ ತಕ್ಷಣ ಕೆಲವು ಕಾವಲುಗಾರ ಜೇನುಗಳು ಅಲ್ಲಿಗೆ ಧಾವಿಸಿ ಆ ಶವವನ್ನು ಹಿಡಿದೆಳೆದು ಹೊರಚೆಲ್ಲುತ್ತವೆ. ರಾಣಿ ಜೇನು ಈ ರುದ್ರನಾಟಕವನ್ನು ಕೊನೆಮುಟ್ಟಿಸದೆ ಸುಸ್ತಾಗಿ ನಿಂತರೆ ಸುತ್ತುವರಿದು ನಿಂತ ರಕ್ಷಣಾದಳದವರು ಕೊಲೆಯ ಕೆಲಸವನ್ನು ಪೂರೈಸಿ ಈ ರಾಜಸೌಧಗಳನ್ನೆಲ್ಲಾ ನೆಲಸಮ ಮಾಡುತ್ತವೆ. ರಾಜವಂಶದ ಕೊಲೆ ಕೊನೆಗೊಂಡಮೇಲೆ ಕುಮಾರಿ ರಾಣಿ ಗರ್ಭ ಧರಿಸುವವರೆಗೂ ಅವಳಿಗೆ ಸಲ್ಲಬೇಕಾದ ಎಲ್ಲ ಘನತೆ ಗೌರವಗಳನ್ನು ಪಡೆಯಲಾರಳು.

ಹಿರಿಯ ರಾಣಿಗೆ ರಾಜ್ಯ ಇಷ್ಟು ಸುಗಮವಾಗಿ ಕೈ ಸೇರುವುದಿಲ್ಲ. ಸಾಮಾನ್ಯವಾಗಿ ಎರಡನೆಯ ಹಿಂಡು ಈ ರಾಜತ್ಯಾಗ ಮಾಡಬೇಕೆಂಬ ತೀರ್ಮಾನ ಈ ಪ್ರಜಾ

ಪ್ರಭುತ್ವದಲ್ಲಿ ಆಗಿರುತ್ತದೆ. ಆಗ ರಕ್ಷಣಾದಳದವರು
ಹಿರಿಯ ರಾಣಿಗೆ ದಾರಿ ಬಿಟ್ಟುಕೊಡುವ ಬದಲು ರಾಜ
ಸೌಧಗಳ ಕಡೆ ರೋಷದಿಂದ ನುಗ್ಗುವ ರಾಣಿಯನ್ನು
ತಡೆಗಟ್ಟುತ್ತಾರೆ. ಅಸೂಯೆಯ ಜ್ವಾಲೆಯಿಂದ ಉರಿ
ಯುತ್ತಿರುವ ರಾಣಿ ಮುಂದೆ ಮುಂದೆ ನುಗುತ್ತಾಳೆ. ಅನೇಕ
ಸಾರಿ ರಕ್ಷಣಾದಳದವರು ಬಲಪ್ರಯೋಗಮಾಡಿ ರಾಣಿ
ಯನ್ನು ಹಿಂದಟ್ಟುತ್ತಾರೆ. ಈ ರಾಣಿ ಎತ್ತ ಕಡೆ
ಯಿಂದಲೂ ರಾಜಕುವರಿಯರಿರುವ ರಾಜಮಂದಿರಗಳತ್ತ
ಹೋಗದಂತೆಎಲ್ಲೆಡೆಯೂ ರುದ್ರಕಾವಲುನೇಮಿತವಾಗಿರು
ತ್ತದೆ. ಛಲದ ಕುಲುಮೆಯಂತೆ ಉರಿಯುತ್ತಿರುವ ರಾಣಿ
ತನ್ನ ದ್ವೇಷವನ್ನು ಸಾಧಿಸಿಕೊಳ್ಳುವ ಮಾರ್ಗವನ್ನು
ಕಾಣದೆ ರಣಕೇಕೆ ಹಾಕುತ್ತ ಹುಟ್ಟಿಯಿಂದ ಹುಟ್ಟಿಗೆ
ತಿರುಗುತ್ತಾಳೆ. ರಾಣಿಯ ರಣಕೇಕೆ ಕೆಲಸಗಾತಿಯರಿಗೆ
ದಿಗ್ಭ್ರಮೆ ಹಿಡಿಸುತ್ತದೆ. ರಾಣಿಯು ರಾಜಸೌಧಗಳ
ಕಡೆ ಧಾವಿಸದಂತೆ ಅವಳನ್ನು ತಡೆಯುತ್ತ, ಹಿಂದಕ್ಕೆ
ದಬ್ಬುತ್ತಿದ್ದ ರಕ್ಷಣಾದಳದ ಜೇನುಗಳು ಈ ರಣಕೇಕೆ
ಯನ್ನು ಕೇಳಿದಾಕ್ಷಣ ಕ್ರೋಧ ಧ್ವನಿ ಅಡಗುವವರೆಗೂ
ಶಿಲೆಬಾಗಿ ನಿಲ್ಲುತ್ತವೆ.

ಎರಡು, ಮೂರು ಕೆಲವು ಸಾರಿ ಐದು ದಿನಗಳವರೆಗೆ
ರಾಣಿಯ ಈ ಕ್ರೋಧ ಪ್ರಲಾಪವನ್ನು ಕೇಳಬಹುದು.
ಈ ರಣದುಂದುಭಿ, ಕೇಣ ಕೇಕೆ ಮುಚ್ಚಿ ಮುದ್ರೆಯೊತ್ತಿದ
ರಾಜಮಂದಿರಗಳಲ್ಲಿರುವ ರಾಜಕುಮಾರಿಯರಿಗೂ ಕೇಳಿ

ಸುತ್ತದೆ. ಈ ರಾಜಕುವರಿಯರಲ್ಲಿ ಕೆಲವರು ಬೆಳೆದು ರೂಪಗೊಂಡಿರುತ್ತಾರೆ. ಈ ಬೆಳೆದು ನಿಂತ ರಾಜಕುವರಿಯರು ಹೊರಬರಲು ಕಾತರಿಸುತ್ತಾರೆ. ಈ ಕುವರಿಯರು ಹೊರಬಂದರೆ ಹಿರಿಯ ರಾಣಿ ಅವರನ್ನು ಹರಿದು ಚಿಂದಿಮಾಡುವಳೆಂದು ಕಾವಲು ಕಾಯುತ್ತಿರುವ ರಕ್ಷಣಾದಳದವರಿಗೆ ಮತ್ತಿತರ ಜೇನುಗಳಿಗೆ ಗೊತ್ತು. ಕುಲದ ಏಳಿಗೆಗಾಗಿ ಸದಾ ದುಡಿಯುತ್ತಿರುವ ಈ ಜೇನುಹುಳುಗಳು ಅದಕ್ಕೆ ಅವಕಾಶ ಕೊಡುವುದಿಲ್ಲ. ಹೊರಗೆ ಬರಲು ಕಾತರಿಸುತ್ತಿರುವ ರಾಜಕುಮಾರಿಯರು ತಮ್ಮ ಗೂಡಿನ ಬಾಗಿಲ ಮೇಣವನ್ನು ಒಳಗಿನಿಂದ ಅಗಿಯುತ್ತಿದ್ದರೆ ಕೆಲಸಗಾತಿ ಜೇನುಗಳು ಹೊರಗಿನಿಂದ ಹೆಚ್ಚು ಹೆಚ್ಚು ಮೇಣವನ್ನು ಮೆತ್ತಿ ಅವು ಹೊರಗೆ ಬಾರದಂತೆ ತಡೆಯುತ್ತವೆ. ತನ್ನ ಗೂಡಿನ ಒಳಗಿನಿಂದ ಬಾಗಿಲ ಮೇಣವನ್ನು ತೆಗೆಯುತ್ತಿರುವ ರಾಜಕುವರಿಗೆ ಹೊರಗಿನ ಹಿರಿಯರಾಣಿಯು "ರಣಕೇಕೆ" ಕೇಳಿಸುತ್ತದೆ. ಹೊರಗೆ ಬರಲು ತವಕಪಡುತ್ತಿರುವ ರಾಜಕುಮಾರಿಗೆ ಜೇನುಗೂಡೆಂದರೆ ಏನೆನ್ನುವುದೇ ತಿಳಿದಿಲ್ಲ. ಆದರೂ ಹಿರಿಯ ರಾಜಕುಮಾರಿಯ ರಣಸವಾಲಿಗೆ ಪ್ರತಿ ಸವಾಲಿನ ರಣದುಂದುಭಿಯನ್ನು ಮೊಳಗಿಸುತ್ತಾಳೆ. ರಾಜಕುಮಾರಿಯು ಗೂಡಿನೊಳಗಿರುವುದರಿಂದ ಈ ರುದ್ರನಾದ ಅಷ್ಟು ಸ್ಪಷ್ಟವಾಗಿ ಕೇಳಿಸುವುದಿಲ್ಲ. ಆದರೂ ನಡುರಾತ್ರಿಯಲ್ಲಿ ಮಿನುಗುವ ನಕ್ಷತ್ರಗಳ ಶಾಂತಕಾಂತಿ ರಾಜ್ಯವಾಳು

ತ್ತಿರುವಾಗ ಈ ರಾಜಕುಮಾರಿಯ ರಣದುಂದುಭಿಯ
ಧ್ವನಿಯನ್ನು ಕಿವಿಗೊಟ್ಟರೆ ಸ್ಪಷ್ಟವಾಗಿ ಜೇನು ಸಾಕು
ವವರು ಕೇಳಬಹುದು.

ಹೊರಹೊರಡಲು ತವಕಿಸುತ್ತಿರುವ ರಾಜಕುವರಿ
ಯರ ಮೇಲೆ ಕೆಲಸಗಾತಿಯರು ವಿಧಿಸುತ್ತಿರುವ ಪ್ರತಿಬಂಧ
ಈ ರಾಜಕುಮಾರಿಯರಿಗೆ ಅನುಕೂಲ ಪ್ರದವಾಗಿರು
ತ್ತದೆ. ಈ ಎರಡು ಮೂರು ದಿನಗಳಲ್ಲಿ ಕಿರಿಯ ರಾಜ
ಕುವರಿಯರು ಸಂಪೂರ್ಣವಾಗಿ ಬೆಳೆದು ಹೊರ
ಬಂದಾಕ್ಷಣ ಹಾರಿಹೋಗುವಷ್ಟು ಶಕ್ತಿಯುತರಾಗು
ತ್ತಾರೆ. ಹಿರಿಯ ರಾಣಿಯು ಸಹ ಚೆನ್ನಾಗಿ ಬೆಳೆದು
ರಾಜ್ಯತ್ಯಾಗ ಮಾಡಿ ಹೋಗುವಾಗ ದಾರಿಯಲ್ಲಿ ಒದಗ
ಬಹುದಾದ ಅಪಾಯಗಳನ್ನು ಎದುರಿಸುವ ಶಕ್ತಿ ಪಡೆಯು
ತ್ತಾಳೆ. ಹಿರಿಯರಾಣಿ ಮುಂದಾಳಾಗಿ ಒಂದು ಗುಂಪು
ರಾಜ್ಯತ್ಯಾಗಮಾಡಿ ಹೊರಡುತ್ತದೆ. ಹಿರಿಯ ರಾಣಿ
ತನ್ನ ಗುಂಪಿನೊಂದಿಗೆ ಹಾರಿ ಹೋದಾಕ್ಷಣ ನಗರದಲ್ಲಿ
ಉಳಿದ ಕೆಲಸಗಾತಿ ಜೇನುಗಳು ಒಬ್ಬ ರಾಜಕುವರಿ
ಮೇಲಿನ ಪ್ರತಿಬಂಧವನ್ನು ತೆಗೆದು ಬಿಡುಗಡೆಮಾಡು
ತ್ತವೆ. ಹಿರಿಯ ರಾಣಿಯಂತೆ ಇವಳೂ ಕ್ರೋಧದಿಂದ
ಕುದಿಯುತ್ತ ಇತರ ರಾಜಕುವರಿಯನ್ನು ಸಂಹರಿಸಲು
ಮುನ್ನುಗ್ಗಿ ವಿಫಲಳಾಗಿ ಮೂರನೆ ಹಿಂಡಿನ ಮುಂದಾಳಾಗಿ
ರಾಜ್ಯತ್ಯಾಗಮಾಡಿ ಮಾತೃನಗರವನ್ನು ಶೂನ್ಯಮಾಡ
ಬಹುದು.

ಮೊದಲನೆಯ ಹಿಂಡು "ತಾಯಿ" ರಾಣಿಜೇನನ್ನು ಕೂಡಿಕೊಂಡು ಹೊರಟು ಹೋದ ಮೇಲೆ ಎರಡನೆಯ ಹಿಂಡುಹಾರಕೂಡದೆಂದು ಪ್ರಜಾಪರಿಷತ್ತಿನಲ್ಲಿ ತೀರ್ಮಾನ ವಾಗಿದೆ ಎಂದು ಇಟ್ಟುಕೊಳ್ಳಿ. ಈಗ ಹಿರಿಯ ರಾಜ ಕುವರಿ ನಿದ್ರಿಸುತ್ತಿರುವ ಇತರ ರಾಜಕುವರಿಯರನ್ನು ತಕ್ಷಣ ಕೊಲೆ ಮಾಡಲು ಬಿಡಬಹುದು. ಇಲ್ಲವೆ ಈ ಕುಮಾರಿ ರಾಣಿ ಗರ್ಭವತಿಯಾಗುವವರೆಗೂ ಕೊಲೆಯ ಆಜ್ಞೆಯನ್ನು ತಡೆಹಿಡಿಯಬಹುದು. ಕೊಲೆಗೆ ಅವಕಾಶ ಕೊಡದೆ ಓಟ್ಟಿದ್ದ ಹಿರಿಯ ರಾಜಕುವರಿಯನ್ನು ರಕ್ಷಣಾ ದಳದವರು ತಡೆಗಟ್ಟಿದಾಗ, ಕುಮಾರಿಯಾದ ರಾಣಿಯು ನೀಲಾಕಾಶದಲ್ಲಿ ಕೈಗೊಳ್ಳುವ ಪರಿಣಯ ಪ್ರವಾಸದಲ್ಲಿ ಒದಗಬಹುದಾದ ಅಪಘಾತಗಳನ್ನು ದಾಟಿ ಗರ್ಭವತಿ ಯಾಗಿ ಬರಲೆಂದು ಕಾಯುತ್ತಿವೆಯೋ ಇಲ್ಲವೆ ಈ ರಾಣಿಯು ಎರಡನೆ ಹಿಂಡಿನ ಮುಂದಾಳಾಗಿ ರಾಜ್ಯ ತ್ಯಾಗಮಾಡಬೇಕೆಂಬ ತೀರ್ಮಾನಕ್ಕೆ ಬಂದು ತಡೆಯು ತ್ತವೆಯೋ ಖಚಿತವಾಗಿ ಹೇಳಲಾಗುವುದಿಲ್ಲ.

ಎರಡನೆಯ ಹಿಂಡು ಹಾರಿಹೋದ ಮೇಲೆ ಸಾಮಾನ್ಯ ವಾಗಿ ತ್ಯಾಗ ಪರಂಪರೆ ನಿಲ್ಲುತ್ತದೆ. ಎರಡನೆ ಹಿಂಡಿನ ರಾಜ್ಯತ್ಯಾಗವೇ ಕೊನೆಯದೆಂದು ತೀರ್ಮಾನವನ್ನು ಕೈ ಗೊಂಡ ಈ ಪ್ರಜಾಪ್ರಭುತ್ವ ಮೂರನೆಯ ರಾಣಿ ಗೂಡಿ ನೊಳಗಿರುವ ಇತರ ರಾಜಕುಮಾರಿಯರನ್ನು ಇರಿದು ಕೊಲ್ಲಲು ಅವಕಾಶ ಕೊಡುತ್ತದೆ. ಈ ರಾಣಿ ರಾಜ

ವಂಶದ ರಕ್ತದೋಕುಳಿ ಆಡಿ, ರಣಕೇಕೆಯನ್ನು ನಿಲ್ಲಿಸಿ ನಿತ್ಯ ಜೀವನವನ್ನು ನಡೆಸಲು ಪ್ರಾರಂಭಿಸುತ್ತಾಳೆ.

ಎರಡು, ಮೂರನೆಯ ಗುಂಪು ರಾಜ್ಯತ್ಯಾಗ ಮಾಡಿ ಹಾರಿದರೆ ಹಳೆಯ 'ತಾಯಿ' ರಾಣಿಯೊಡನೆ ಹಾರಿದ ಗುಂಪಿನಂತೆಯೆ ನಡೆದುಕೊಳ್ಳುತ್ತವೆ. ಆದರೆ ಈ ಗುಂಪುಗಳಲ್ಲಿ ಮುಂಜಾಗ್ರತೆ ಕಡಮೆ. ಹೊಸ ನಗರದ ನಿವೇಶನವನ್ನು ಹುಡುಕಿ ಗೊತ್ತುಮಾಡಿಕೊಂಡು ಬರಲು ಮುಂದಳಗಳನ್ನು ಕಳುಹಿಸುವುದಿಲ್ಲ. ಇನ್ನೂ ಕುಮಾರಿಯೊದ, ತಾಯ್ತನದ ಹೊರೆಯನ್ನು ಹೊತ್ತಿರದ ರಾಣಿ ಬಹಳದೂರ ಹಾರಿ ಹೋಗುತ್ತಾಳೆ. ದೂರ ಪ್ರದೇಶಗಳಿಗೆ ವಲಸೆ ಹೋಗುವ ಎರಡು, ಮೂರನೆಯ ಗುಂಪುಗಳ ಭವಿಷ್ಯ ಬಹಳ ಕ್ಲಿಷ್ಟವಾದದ್ದಾಗಿರುತ್ತದೆ. ಇವುಗಳು ಕೈಗೊಂಡ ದೂರ ಪ್ರವಾಸದದಾರಿಯಲ್ಲಿ ಅನೇಕ ಕಷ್ಟಪರಂಪರೆಗಳು ಒದಗಬಹುದು. ಅಪಘಾತಕ್ಕೊಳಗಾಗಿ ಗುಂಪು ನಾಶವಾಗಬಹುದು. ಅಲ್ಲದೆ ಇನ್ನೂ ಗರ್ಭವತಿಯಾಗದೆ ಇರುವ ಕುಮಾರಿರಾಣಿ ಗಗನದಲ್ಲಿ ಪ್ರೇಮ ಪರ್ಯಟನವನ್ನು ಕೈಗೊಂಡುಬಸಿರಾಗಿ, ಸತದೃಷ್ಟ ಪ್ರೇಮಿಯ ಬಾಳನ್ನು ಬರಿದುಮಾಡಿ ಮರಳಿ ಮನೆಗೆ ಬರುವವರೆಗೂ ಈ ಗುಂಪುಗಳ ಭವಿಷ್ಯ ಡೋಲಾಯಮಾನವಾಗಿರುತ್ತದೆ.

ಆದರೆ ಈ ಎಲ್ಲ ಸಾವು ನೋವಿನ, ಭೀಕರ ಚಿತ್ರಗಳೊಂದೂ ಇವುಗಳನ್ನು ಎದೆಗುಂದಿಸುವುದಿಲ್ಲ.

ಪ್ರಕೃತಿಯ ಆಜ್ಞೆ ಅಷ್ಟು ಬಲಯುತವಾದದ್ದು. ಈ ಪ್ರಜಾಪಭುತ್ವ ಕೈಗೊಂಡ ತೀರ್ಮಾನದಾಜ್ಞೆ ಹೊರಟಾ ಕ್ಷಣ ಹಿಂಡು ಹಾರಿಹೋಗುತ್ತದೆ. ಅಪಾಯಗಳ ಅನಂತತೆಯಲ್ಲಿ ತೇಲುವ ಈ ಕುಮಾರಿ ರಾಣಿಯೊಂದಿಗೆ ಕೆಲಸಗಾತಿಯರು ಯಾವ ಭಯ ಭೀತಿಯನ್ನು ಯೋಚಿಸದೆ ಹಾರಿ ಬಹುದೂರದ ನೆಲೆಗೆ ಹೋಗುತ್ತಾರೆ.

ಒಂದೊಂದು ಸಾರಿ ಪ್ರತಿಬಂಧದಲ್ಲಿರುವ ರಾಜಕುಮಾರಿಯರನ್ನು ಕ್ರಮವರಿತು ಬಿಡುಗಡೆಮಾಡುವಾಗ ರಕ್ಷಣಾದಳದವರು ತಬ್ಬಿಬ್ಬಾಗುತ್ತಾರೆ. ಆಗ ಇಬ್ಬರು ರಾಜಕುಮಾರಿಯರು ಹೊರಗೆ ಬಂದು ಬೇರೆ ಬೇರೆ ಗುಂಪುಗಳ ಮುಂದಾಳಾಗಿ ರಾಜ್ಯತ್ಯಾಗಮಾಡಿ ಆಕಾಶದಲ್ಲಿ ಸೇರುತ್ತವೆ. ಹೀಗೆ ವಲಸೆ ಹೊರಟ ರಾಜಕುಮಾರಿಯರಲ್ಲಿ ಒಬ್ಬಳು ಎತ್ತರಕ್ಕೆ ಹಾರಿ ತನ್ನ ಪ್ರಿಯನೊಡನೆ ಕೂಡಿ ಗರ್ಭವತಿಯಾಗುವ ಸಂಭವ ಉಂಟು.

ಜೇನುಹುಳುಗಳ ಪ್ರಜಾಪ್ರಭುತ್ವಗಳಲ್ಲಿ ಆಜ್ಞೆಯು ಜಾರಿ ಬೇರೆ ಬೇರೆಯಾಗಿರುತ್ತದೆ. ಒಂದು ಪ್ರಜಾಪ್ರಭುತ್ವ ಹಿರಿಯ ರಾಣಿ ಹುಟ್ಟಿದ ತಕ್ಷಣ ಇತರ ರಾಜಕುಮಾರಿಯರನ್ನು ಕೊಲೆ ಮಾಡಲು ಆಜ್ಞೆಮಾಡಬಹುದು. ಇನ್ನೊಂದು ರಾಜ್ಯದ ಪ್ರಜಾಪ್ರಭುತ್ವ ಕೊಲೆಯನ್ನು ತಡೆಗಟ್ಟಿ ಕುಮಾರಿ ರಾಣಿ ಗರ್ಭವತಿಯಾಗುವುದನ್ನೇ ಕಾಯುತ್ತಿರಬಹುದು. ಮತ್ತೊಂದು ಕೊಲೆಯ ಆಜ್ಞೆಯನ್ನು ಕೊಡದೆ ರಾಣಿ ಎರಡನೆಯ ಗುಂಪಿನ ಮುಂದಾ

ಳಾಗಿ ಹೊರಡುವಂತೆ ರಾಜ್ಯತ್ಯಾಗದ ಆಜ್ಞೆಯನ್ನು ಹೊರಡಿಸಬಹುದು. ಜೇನುಗಳ ಒಂದು ಪ್ರಜಾಪ್ರಭುತ್ವ ಹಿರಿಯ ರಾಣಿ ಹುಟ್ಟಿದಾಕ್ಷಣ ಇತರ ರಾಜಕುವರಿಯರ ಕೊಲೆಗೆ ಆಜ್ಞೆ ಕೊಡುವುದು ತುಂಬಾ ದುಡುಕಿನ ಕೆಲಸ ವಾಗುತ್ತದೆ—ಈ ರಾಣಿ ಪರಿಣಯ ಪರ್ಯಟನದಲ್ಲಿ ಆಪಘಾತಕ್ಕೊಳಗಾಗಿ ಸತ್ತರೆ, ಮೂರು ದಿನಗಳಿಗಿಂತ ಹೆಚ್ಚು ವಯಸ್ಸಾಗದ ಕೆಲಸಗಾತಿ ಜೇನಿನ ಜಾತಿಯ ಮರಿಗಳನ್ನು "ರಾಜರಸ" ಕೊಟ್ಟು ರಾಜಕುಮಾರಿಯ ರನ್ನಾಗಿ ಪರಿವರ್ತಿಸಬಹುದು. ಆದರೆ ಈ ಕಾಲಕ್ಕಾಗಲೆ ಎಲ್ಲ ಕೆಲಸಗಾರ ಮರಿಗಳ ವಯಸ್ಸು ಈ ಅವಧಿಯನ್ನು ಮಿಕ್ಕಿರುತ್ತದೆ. ಆಗ ರಾಣಿ ಇಲ್ಲದಂತಾಗಿ ಸರ್ವನಾಶ ವಾಗುತ್ತದೆ. ಕುಮಾರಿಯಾದ ರಾಣಿ ತಾಯಾಗಲು ತಾನು ಜನ್ಮತಾಳಿದ 20 ದಿನಗಳೊಳಗಾಗಿ ಅಂತರಿಕ್ಷಕ್ಕೆ ಹಾರಿ ಅಲ್ಲಿ ತನ್ನನ್ನು ಗೆದ್ದ ಗಂಡಿನೊಡನೆ ಸೇರಿ ಗರ್ಭ ವತಿಯಾಗಿ ಮನೆಗೆ ಹಿಂದಿರುಗಬೇಕು. ಮಳೆಗಾಳಿಯ ಅಡಚಣೆಯಿಂದ, ಕೆಲವು ಸಾರಿ ರಾಜಕುಮಾರಿಯು ಆಕಾಶದಲ್ಲಿ ಬಹಳ ಎತ್ತರಕ್ಕೆ ಹಾರಲು ಅವಳ ರೆಕ್ಕೆಗಳು ಇನ್ನೂ ಬಲಿಯದೆ ಇರುವುದರಿಂದ 20 ದಿನಗಳಿಗಿಂತ ಹೆಚ್ಚಿಗೆ ಕಾಲ ಗೂಡಿನಲ್ಲಿಯೇ ನಿಲ್ಲಬೇಕಾಗುತ್ತದೆ. ಆಗ ಅವಳು ಆ ಜೀವ ಪರ್ಯಂತರ ಕುಮಾರಿಯಾಗಿ ಉಳಿ ಯುತ್ತಾಳೆ. ಕುಮಾರಿಯಾದರೂ ಬಂಜೆಯಾಗಿರುವು ದಿಲ್ಲ. ಇದು ಪ್ರಕೃತಿಯ ಒಂದು ವಿಚಿತ್ರ ನಿಯಮ.

ಕುಮಾರಿ ರಾಣಿ ಗಂಡಿನೊಡನೆ ಸೇರದಿದ್ದರೂ ಮೊಟ್ಟೆ ಇಡುತ್ತಾಳೆ. ಇದನ್ನು "ನಿರ್ಲಿಂಗ ಉತ್ಪತ್ತಿ" ಎಂದು ಕರೆಯುತ್ತಾರೆ. ಆದರೆ ಕುಮಾರಿಯಾದ ರಾಣಿ ಚಿಕ್ಕ ಮನೆ(ಕೆಲಸಗಾರ ಹುಳುಗಳು ಹುಟ್ಟುವ ಮನೆ)ಯಲ್ಲಿಯೇ ಆಗಲಿ, ದೊಡ್ಡಮನೆ (ಗಂಡು ಹುಳುಗಳು ಹುಟ್ಟುವ ಮನೆ)ಯಲ್ಲಿಯೇ ಆಗಲಿ ಇಟ್ಟ ಈ ಮೊಟ್ಟೆಗಳಿಂದ ಗಂಡು ಜೇನು ಹುಳುಗಳೇ ಹುಟ್ಟುತ್ತವೆ. ಗಂಡು ಹುಳುಗಳು ಕುಲದ ಉದ್ಧಾರಕ್ಕೆ ಆವಶ್ಯಕ. ಆದರೆ ಮಿತಿಮೀರಿದ ಸಂಖ್ಯೆಯಲ್ಲಿ ಅಹಿತ. ಈ ಗಂಡು ಸಂತಾನ ಯಾವ ಕೆಲಸವನ್ನೂ ಮಾಡುವುದಿಲ್ಲ. ಕೆಲಸಗಾತಿಯರು ತಮ್ಮ ಬಿಡುವಿಲ್ಲದ ದುಡಿಮೆಯಿಂದ ಕೂಡಿಟ್ಟ ಮಧು ವನ್ನು ಹೀರಿ ಮತ್ತೇರಿ ನಗರದಲ್ಲಿ ಅಲೆಯುತ್ತವೆ. ನಗರವ ತುಂಬಾ ಕೊಳಕನ್ನು ಚೆಲ್ಲುತ್ತವೆ. ಕುಮಾರಿ ಯಾದ ರಾಣಿಯಿಂದ ಜನ್ಮ ಪಡೆಯುವ ಅನೇಕ ದಶ ಸಹಸ್ರ ಗಂಡು ಜೇನುಗಳಿಗೆ ಆಹಾರವನ್ನು ಅಳೆಯುವ, ಅವುಗಳ ಆಲಸ್ಯ ವರ್ತನೆಯಿಂದ ನಗರದ ತುಂಬಾ ಹರಡುತ್ತಿರುವ ಕೊಳಕನ್ನು ತೆಗೆದು ನಗರವನ್ನು ಶುಚಿ ಗೊಳಿಸುವ ಮತ್ತು ನಗರವನ್ನು ರಕ್ಷಿಸುವ ಕೆಲಸವನ್ನು ಬಿಡುವಿಲ್ಲದೆ ಮಾಡಿ ಕೆಲಸಗಾತಿ ಜೇನುಗಳೆಲ್ಲಾ ನಾಶ ವಾಗುತ್ತವೆ. ಕೆಲಸಗಾತಿಯರ ನಾಶದೊಂದಿಗೆ ನಗರದ ಸರ್ವನಾಶವಾಗುತ್ತದೆ.

# ಸುನೀಲ ಶೂನ್ಯದಲ್ಲಿ ಪರಿಣಯ ಪರ್ಯಟನ

ಕುಮಾರಿಯಾದ ರಾಣಿ ದಿಗಂತದ ದಿವ್ಯ ಸುನೀಲ ಶೂನ್ಯದಲ್ಲಿ ಪ್ರಣಯಿಯನ್ನು ಸೇರಿ ಗರ್ಭದಾನ ಪಡೆಯುತ್ತಾಳೆ. ಒಂದು ನಗರದಲ್ಲಿ (ಜೇನುಗೂಡಿನಲ್ಲಿ) ಮೈತುಂಬಿ ಬೆಳೆದ ನೂರಾರು, ಕೆಲವು ಸಾರಿ ಸಾವಿರಾರು ಗಂಡು ಜೇನುಹುಳುಗಳು ಕುಮಾರಿಯಾದ ರಾಣಿಯೊಡನಿರುತ್ತವೆ. ಇವು ಗೂಡಿನಲ್ಲಿ ಕುಮಾರಿ ರಾಣಿಯನ್ನು ನೋಡಿದಾಗ ಇರಲಿ, ಅವಳ ಸುಪುಷ್ಟ ಸುಂದರ ಮೈಗೆ ತಮ್ಮ ಮೈ ಉಜ್ಜಿ ನಡೆದಾಗಲೂ ಸಹ ಪ್ರೇಮ ಕೇಳಿ ಕಾಮ ಕಾಲ್ಕೆದರುವುದಿಲ್ಲ. ಆದರೆ ನಿತ್ಯ ಮಧ್ಯಾನ್ಹ ಮೂರು ಘಂಟೆಯವರೆಗೂ ಅಂತರಿಕ್ಷದಲ್ಲಿ ಸುತ್ತುತ್ತವೆ, ಪ್ರೇಯಸಿಯನ್ನು ಕೂಡ ಬಯಸಿ, ರಾಜಕುಮಾರಿಯ ಬೇಟ ಬಯಸಿ; ಅವಳ ಪ್ರೇಮಬಂಧನದಲ್ಲಿ ಪ್ರಾಣಾರ್ಪಣೆ ಮಾಡಲು ಕಾತರರಾಗಿ, ಕ್ಷಣಕಾಲ ಪ್ರೇಮಸುಧೆಯಲ್ಲಿ ತೇಲಿ ಅಸುವೀಯಲು ಸಿದ್ಧರಾಗಿ; ಸುರ, ಕಿನ್ನರ, ಗಂದರ್ವಲೋಕಗಳ ಸರ್ವ ಸುಖಗಳಿಗೆ ಮಿಗಿಲಾದ ಮಾಟಗಾತಿ ರಾಜಕುಮಾರಿಯ ಅನುರಾಗ ಆಲಿಂಗನದಲ್ಲಿ ಸಾವನ್ನಪ್ಪಲು ಬೇರೆ ಬೇರೆನಗರಗಳಿಂದ ಕೊಬ್ಬಿ ಬೆಳೆದ ಸಾವಿರಾರು ಗಂಡು ಜೇನುಗಳು ಪ್ರಕೃತಿಯ ಬಟ್ಟ ಬಯಲಲ್ಲಿ ಒಟ್ಟು ಸೇರುತ್ತವೆ. ಪ್ರೇಮೋನ್ಮತ್ತ ಈ

ಗಂಡುಗಳ ಹಿಂಡಿನಲ್ಲಿ ಕುಮಾರಿರಾಣಿಯ ಪ್ರೇಮಸ್ಪರ್ಧೆಯಲ್ಲಿ ಮಿಂದು ಮಡಿಯುವುದು ಒಂದೇ ಒಂದು ಗಂಡು—ಭೀಮ ಬಲಕಾಯ ಗಂಡು.—ಇದು ಪ್ರಕೃತಿಯ ನಿಯಮ—ಸುಪುಷ್ಟವಾಗಿ ಬೆಳೆದ ಬೇರೆ ಬೇರೆ ತಳಿಗಳ ಹೆಣ್ಣು (ಕುಮಾರಿ ರಾಣಿ) ಗಂಡುಗಳ ಮಿಲನದಿಂದ ಉತ್ಕೃಷ್ಟ ಭಾವಿ ಜನಾಂಗದ ಉತ್ಪತ್ತಿಯಾಗಬೇಕು—ಇದು ಪ್ರಕೃತಿಯ ಕಟ್ಟು.

ತಾಯಾಗಲು ಚಡಪಡಿಸುತ್ತಾಳೆ ಕುಮಾರಿ ರಾಣಿ. ಆದರೆ ಗರ್ಭದಾನ ಪಡೆಯಲು ಗಗನಕ್ಕೆ ಹಾರಬೇಕು. ಕಾರ್ಮೋಡ, ಮಳೆಮಿಂಚು, ಬಿರುಗಾಳಿ. ಹಿಮಮಂಜು. ಕೊಳೆ ಧೂಳು ತುಂಬಿದ ಗಗನಕ್ಕೆ ರಾಣಿ ಕಾಲಿಡಲೆಳಸುವುದಿಲ್ಲ. ನೋಡ, ಮಳೆಗಳಿಲ್ಲದ ನಿರ್ಮಲ ಆಕಾಶ, ನೀಲಿಯ ಸುಂದರ ಸುಪ್ಪತ್ತಿಗೆಯನ್ನು ಹಾಸಿ ಹರೆಯದ ಈ ಹೆಣ್ಣನ್ನು ಕೈಹಿಡಿದು ಕರೆಯಬೇಕು. ಪ್ರಥಮ ಸಮಾಗಮದ ಸುಖದ ಸೀಮೆಗೆ. ಪ್ರಕೃತಿಮಾತೆಯ ಈ ಆದರದ ಆಹ್ವಾನವಿಲ್ಲದೆ ರಾಜಕುಮಾರಿ ಪ್ರಕೃತಿಯ ಪವಿತ್ರ ಶಯ್ಯಾಗಾರವನ್ನು ಸೇರಲಾರಳು. ಕಾತರದಿಂದ ಕಾಯುತ್ತಿದ್ದ ಪ್ರಕೃತಿಯ ಕರೆ ಕೈಸೇರುತ್ತದೆ. ನೀಲಾಕಾಶದ ಕಣ್ಣು ಕರೆಯುತ್ತಿದೆ ರಾಣಿಯನ್ನು ನಲವಿನ ನಾಡಿಗೆ–ನಿಶೆಯುಡಿಸಿದ್ದ ಕಪ್ಪುಡಿಗೆಯನ್ನೆಳೆದು ಹಚ್ಚ ಹಸುರಿನ ಉಡಿಗೆ ಉಡಿಸಿ, ಬಣ್ಣ ಬಣ್ಣದ ತೊಡಿಗೆ ತೊಡಿಸಿ, ವನಕನ್ನೆಯರ ಸುಂದರ ವದನಗಳನ್ನು

ಹನಿ ಹನಿ ಹಿಮಮಣಿಯಿಂದ ಮುಂಜಾವಿನ ಹೊಂಗಿರಣ ಗಳು ತೊಳೆಯುವಾಗ ಕುಮಾರಿ ರಾಣಿ ಸಡಗರದಿಂದ ಹೊರಬಂದು ತಾನು ಹುಟ್ಟಿದಂದಿನಿಂದ ಕಾಣದ ಹೊಂಬೆಳಕನ್ನು ನೋಡುತ್ತಾಳೆ. ತನ್ನ ನಗರದ ಬಾಗಿಲಿಂದ ಸ್ವಲ್ಪದೂರ ಹಾರಿ ತಕ್ಷಣ ಹಿಂತಿರುಗಿ ಬಾಗಿಲ ಬಳಿ ಇಳಿಯುತ್ತಾಳೆ. ಹೀಗೆ ಎರಡು, ಮೂರು ಸಾರಿ ಹಾರಾಡಿ ತನ್ನ ಗೂಡಿರುವ ನೆಲೆಯನ್ನು ಚಿತ್ತದಲ್ಲಿ ಚಿತ್ರಿಸಿಕೊಂಡು ಹಾರುತ್ತಾಳೆ. ಕಾಮನ ಬಿಲ್ಲಿನಿಂದ ಹಾರುವ ಪ್ರೇಮಬಾಣದಂತೆ ಪ್ರಶಾಂತ ಉಜ್ವಲ ಸುನೀಲ ಶೂನ್ಯ ಶಯ್ಯಾಗಾರಕ್ಕೆ ಹಾರುತ್ತಾಳೆ ಈ ಹರೆ ಯದ ಹೆಣ್ಣು. ಈ ರಾಜಕುಮಾರಿಯ ಮೈಯಿಂದ ಹೊರಹೊಮ್ಮಿದ ಮಾಯಾವೀಣೆಯನಾದ, ಮಾಟದ ಮಲ್ಲಿಗೆಯ ಕಂಪು, ಬಿಸಿಲಿಗೆ ಮೈಯೊಡ್ಡಿ ಪುಷ್ಪಪತ್ರದ ಮೇಲೆ ನಲಿಯುತ್ತಿರುವ ಗಂಡುಗಳ ಹಿಂಡನ್ನು ಸೆರೆ ಹಿಡಿದು ಶೂನ್ಯಕ್ಕೆ ಎಳೆಯುತ್ತದೆ. ಮನ್ಮಥನು ಬಿಟ್ಟ ಶರವರ್ಷದಂತೆ ಗಂಡುಗಳ ಹಿಂಡು ಗಗನಕ್ಕೇರುತ್ತವೆ. ಭೀಮಬಲಕಾಯ ಗಂಡು ಮಾತ್ರ ಈ ದಷ್ಟಪುಷ್ಟ ಹೆಣ್ಣಿ ನೊಡನೆ ಸೇರಬೇಕೆಂಬ ಪ್ರಕೃತಿಯ ನಿಯಮವನ್ನು ನೆರವೇರಿಸುವ ರಾಣಿ ಆಕಾಶದ ಅನಂತತೆಯನ್ನು ಭೇದಿಸುವಂತೆ ಮಾಯಾವೇಗದಲ್ಲಿ ಮೇಲ ಮೇಲಕ್ಕೆ ಹಾರುತ್ತಾಳೆ—ಬೇರೆ ಜೇನುಹುಳುಗಳು ತಮ್ಮ ಜೀವ ಮಾನದಲ್ಲಿ ಎಂದೆಂದೂ ಹಾರದ ಅಂತರಕ್ಕೆ ಹಾರುತ್ತಾಳೆ.

ಕಾಮ ಕೆರಳಿ ರೆಕ್ಕೆಗಳ ಬಲ ಸೊಕ್ಕಿದ ಈ ಗಂಡು ಜೇನು ಗಳು ಕುಮಾರಿಯನ್ನು ಕೂಡಲು ನಾನು ತಾನೆಂದು ಅವಳ ಹಿಂದೆ ಹಿಂದೆ ಹಾರುತ್ತವೆ. ಹಕ್ಕಿಗಳ ಸುಳಿವಿಲ್ಲದ ನಿರ್ಮಲ ನೀಲಾಕಾಶದ ನಿಲುವನ್ನು ನಿಲುಕುತ್ತಾಳೆ ರಾಣಿ. ಅಷ್ಟರಲ್ಲಿ ಪ್ರಕೃತಿ ನಿಯಮಿತವಾದ ಈ ವಿಚಿತ್ರ ಪಂದ್ಯದಲ್ಲಿ ಗೆಲ್ಲಲು ಗಡುಸಿಲ್ಲದ ಬಲಹೀನ ಗಂಡುಜೇನು ಗಳ ಹಿಂಡು ರಾಣಿಯಿಂದ ಬಹಳ ಹಿಂದುಳಿಯುತ್ತದೆ. ನಾಶದ ನಕಾಶೆಯನ್ನು ನಿರ್ಮಿಸುತ್ತಿರುವ ನಗಗಳಿಂದ ಹಾರಿಬಂದ ಅರೆಹೊಟ್ಟೆಯ ಗಂಡುಗಳು, ಹರಿದ ರೆಕ್ಕೆಯ ಮುರಿದ ಮೈಯ ಹರೆಯ ಕುಗ್ಗಿದ ಗಂಡುಗಳು, ಮುಂದೆ ಹಾರದೆ ಹಿಂದುಳಿದು ಪಂದ್ಯ ತ್ಯಜಿಸಿ ದಿಗಂತದಲ್ಲಿ ಕರಗಿ ಹೋಗುತ್ತವೆ. ಆಯಾಸವನ್ನು ಅರಿಯದ ಕೆಲವು ಬಲ ಶಾಲಿ ಗಂಡುಗಳ ಒಂದು ಸಣ್ಣ ಗುಂಪು ಕುಮಾರಿ ರಾಣಿಯ ಸುತ್ತ ಸುತ್ತುತ್ತದೆ. ಆರಿಸಿದ ಈ ಗಂಡುಗಳಲ್ಲಿ ಭೀಮ ಬಲಕಾಯ ಗಂಡೊಂದು ರಾಣಿಯ ಪ್ರೇಮಾಲಿಂಗನದಲ್ಲಿ ಅಡಗುವುದು. ಕಾಮಸೂತ್ರದಿಂದ ಕಟ್ಟಿದ ಹರೆಯದ ಹೆಣ್ಣು ಗಂಡುಗಳೆರಡು ಕ್ಷಣಕಾಲ ಸುನೀಲ ಶೂನ್ಯದಲ್ಲಿ ಸುತ್ತುತ್ತವೆ. ರಾಣಿ ಗರ್ಭ ಧರಿಸುತ್ತಾಳೆ.

ಗರ್ಭದಾನಮಾಡಿ ಭಾವಿಜನಾಂಗಕ್ಕೆ ಜೀವ ಕೊಟ್ಟ ಗಂಡು ಜೇನು ಸಾಯಬೇಕು—ರಾಣಿ ಮತ್ತು ಈ ಬಲಿಷ್ಠ ಗಂಡು ಜೇನಿನ ಕಾಮಕೇಳಿ ಕೊನೆಗಾಣುವುದು ಗಂಡಿನ ಭೀಕರ ಕೊಲೆಯಲ್ಲಿ. ಗಂಡು ಜೇನಿಗೆ ಮಾದ್ರಿ

ಯನ್ನಪ್ಪಿದ ಪಾಂಡುವಿನಂತೆ ಶೃಂಗಾರರಂಗವೇ ಸಾವಿನ ಚಿತೆಯಾಗುತ್ತದೆ. ಈ ಉನ್ಮತ ಹೆಣ್ಣು ಗಂಡುಗಳ ಕಾಮಕೇಳಿ ಕೊನೆ ಮುಟ್ಟದಾಕ್ಷಣ ಗಂಡಿನ ಉದರ ಒಡೆದು ವೀರ್ಯಕೋಶ ಸಂಪೂರ್ಣವಾಗಿ ಕುಮಾರಿ ರಾಣಿಯ ಗರ್ಭವನ್ನು ಸೇರುತ್ತದೆ. ಗಂಡುಜೇನು ತನ್ನನ್ನೆ ಬಲಿದಾನ ಕೊಟ್ಟು ಹೆಣ್ಣಿಗೆ ಧಾರೆ ಎರೆದ ವೀರ್ಯಕೋಶದೊಂದಿಗೆ, ಅದರ ಹೊಟ್ಟೆಯ ಕರುಳೆಲ್ಲಾ ಹೊರಬರುತ್ತದೆ. ರೆಕ್ಕೆಗಳು ಸೊಕ್ಕಡಗಿ ನಿಲ್ಲುತ್ತವೆ. ಮಾಟಗಾತಿ ರಾಣಿಗೆ ಕರುಳಿನ ಮಾಲೆಯನ್ನು ಹಾಕಿ, ಗಂಡು ಜೇನು ಕೆಳಕ್ಕೆ ಉರುಳುರುಳಿ ಮಣ್ಣುಗೂಡುತ್ತದೆ.

ಬೇರೆ ಬೇರೆ ತಳಿಗಳ ಸುಪುಷ್ಟ ಗಂಡು ಹೆಣ್ಣುಗಳು ಸೇರಿ ಉತ್ಕೃಷ್ಟ ತಳಿ ಉತ್ಪತ್ತಿಯಾಗಲು ಈ ಬಟ್ಟ ಬಯಲ ಬೇಟದ ಆಟವನ್ನು ಹೂಡಿದ್ದಾಳೆ ಪ್ರಕೃತಿದೇವಿ. ಮಳೆ, ಗಾಳಿ, ಪಕ್ಷಿ, ಕೀಟಗಳಿಂದ ಒದಗಬಹುದಾದ ತೊಂದರೆಯಿಂದ ಪಾರಾಗಲು ಈ ಗಂಡು ಹೆಣ್ಣುಗಳ ಸಮಾಗಮ ಕ್ಷಣಕಾಲದಲ್ಲಿ ಸಂಪೂರ್ಣವಾಗುತ್ತದೆಂದು ಕಾಣುತ್ತದೆ.

ಒಂದೇ ಒಂದು ಬಾರಿ ಕಾಮಬಂಧನ ಸಾಕು, ರಾಣಿ ತನ್ನ ಜೀವನ ಪರ್ಯಂತರ ಗಂಡನ್ನು ಮತ್ತೆ ಕೂಡಬೇಕಾಗಿಲ್ಲ. ಈ ರಾಣಿ ಗಂಡನ್ನು ಸೇರುವುದೂ ಇಲ್ಲ. ಗಂಡು ಜೇನಿನಿಂದ ಪಡೆದ ವೀರ್ಯಕೋಶವನ್ನು ತನ್ನ ಉದರದ ಒಂದೆಡೆಯಲ್ಲಿ ಅಡಗಿಸಿಕೊಂಡು ರಾಣಿ ದ್ವಿಲಿಂಗಿಯಾಗು

ತ್ತಾಳೆ. ತನ್ನ ನಗರಕ್ಕೆ ಬಂದ ರಾಣಿ ಸಾಯುವವರೆಗೆ ಮೊಟ್ಟೆಗಳನ್ನಿಡುವುದೊಂದೇ ಕೆಲಸ.

ತನ್ನ ಪ್ರೇಮಿಯು ಕೊಟ್ಟ ಕರುಳುಮಾಲೆಯನ್ನೆಳೆದು ಕೊಂಡು, ಅಂತರಿಕ್ಷದ ಉನ್ನತ ನೆಲೆಯಿಂದಿಳಿದು ತನ್ನ ನಗರದ ಬಾಗಿಲಿಗೆ ಬರುತ್ತಾಳೆ ರಾಣಿ. ಕೆಲವು ಸಾರಿ ಕೆಲಸಗಾತಿಯರಾದ ಜೇನುಗಳೆಲ್ಲಾ ಸೇರಿ ಸಂತಸದಿಂದ ನಾಟ್ಯವಾಡುತ್ತ ಗರ್ಭವತಿಯಾಗಿ ಮರಳಿದ ತಮ್ಮ ರಾಣಿಯನ್ನು ಸ್ವಾಗತಿಸುತ್ತವೆ. ತನ್ನ ನಗರ ಬಾಗಿಲಲ್ಲಿ ಇಳಿದ ರಾಣಿ ತನ್ನ ಹಿಂದೆ ಮಾಲೆ ಮಾಲೆಯಾಗಿ ನೇತಾಡುತ್ತಿರುವ ತನ್ನ ಪ್ರೇಮಿಯ ಕರುಳು ಮಾಲೆ ಯನ್ನೂ, ಅವರೊಡನೆ ಕಿತ್ತು ಬಂದಿರುವ ಇತರ ಅಂಗ ಗಳನ್ನೂ ನಿಧಾನವಾಗಿ ಕಿತ್ತು ಚೆಲ್ಲಿ ತನ್ನ ಅಂಗಾಂಗ ಗಳನ್ನು ಶುಚಿಮಾಡಿ ಕೊಳ್ಳುತ್ತಾಳೆ. ಗಂಡುಜೇನು ಕೊಟ್ಟ ವೀರ್ಯಕೋಶವನ್ನು ಮಾತ್ರ ತನ್ನ ಗರ್ಭದಲ್ಲಿ ಇಟ್ಟುಕೊಳ್ಳುತ್ತಾಳೆ. ಕೆಲಸಗಾತಿಯರು ರಾಣಿಯನ್ನು ಆದರದಿಂದ ಗೂಡಿನೊಳಕ್ಕೆ ಕರೆದುಕೊಂಡು ಹೋಗು ತ್ತಾರೆ. ಗರ್ಭವತಿಯಾದ ಎರಡನೆ ದಿನದಿಂದ ರಾಣಿ ಮೊಟ್ಟೆ ಇಡಲು ಮೊದಲು ಮಾಡುತ್ತಾಳೆ, ತರುವಾಯ ತಾಯಿಯಾಗುತ್ತಾಳೆ.

# ಉಂಡಾಡಿ ಗಂಡುಗಳ ಕಗ್ಗೊಲೆ

ಕುಮಾರಿ ರಾಣಿ ಗಗನದಲ್ಲಿ ಗರ್ಭಧರಿಸಿ ನಗರಕ್ಕೆ ಹಿಂದಿರುಗಿದ ನಂತರ ಈ ನಗರದಿಂದ ಹೊರಟ ಗಂಡುಗಳು ಮರಳಿ ನಗರಕ್ಕೆ ಬರುತ್ತವೆ. ಕೆಲಸಗಾರ ಜೇನುಗಳು ನಗರನೈರ್ಮಲ್ಯ, ರಕ್ಷಣೆ, ಪುಷ್ಪಪರಾಗ, ಮಕರಂದಗಳ ಶೇಖರಣೆ ಮತ್ತು ಮರಿಗಳ ಪೋಷಣೆಯ ಭಾರ ಹೊತ್ತು ಅಹೋರಾತ್ರಿ ಬಿಡುವಿಲ್ಲದೆ ದುಡಿಯುತ್ತಿರುವಾಗ ಗಂಡು ಜೇನುಗಳು ಮಧು ತುಂಬಿದ ಉಗ್ರಾಣಗಳಿಗೆ ನುಗ್ಗಿ, ಹೊಟ್ಟೆತುಂಬ ಮಕರಂದವನ್ನು ಹೀರಿ, ನಗರದ ಒಂದು ಮೂಲೆಯಲ್ಲಿ ಮಲಗಿ ಸುಖ ನಿದ್ರೆಮಾಡಿ, ಮೇಲೆದ್ದು ನಗರವನ್ನೆಲ್ಲಾ ಕೊಳಕು ಮಾಡುತ್ತ ತಿರುಗುತ್ತವೆ. ಭಾವಿ ಜನಾಂಗದ ಉದ್ಧಾರ ದೃಷ್ಟಿಯನ್ನೆ ಮನಸ್ಸಿನಲ್ಲಿಟ್ಟುಕೊಂಡು ಕೆಲಸಗಾತಿಯರಾದ ಜೇನುಗಳು ಬೇಸರವಿಲ್ಲದೆ ಕೊಳಕನ್ನೆಲ್ಲಾ ತೆಗೆದು ಹೊರಹಾಕಿ ನಗರವನ್ನು ಚೊಕ್ಕಟ ಮಾಡುತ್ತವೆ. ಗಂಡು ಜೇನುಗಳು ಉಂಡು ಖಾಲಿ ಮಾಡಿದ ಉಗ್ರಾಣಗಳನ್ನು ಮತ್ತೆ ಮತ್ತೆ ತುಂಬುತ್ತವೆ. ಮಧ್ಯಾಹ್ನದಿಂದ ಮೂರು ಘಂಟೆಗಳವರೆಗೆ ಕೊಬ್ಬಿ ಬೆಳೆದ ಈ ಗಂಡುಗಳು ನಗರದಿಂದ ಹೊರಹೊರಡಲು ಮೊದಲು ಮಾಡುತ್ತವೆ. ನಗರದ ದಾರಿಯಲ್ಲಿ ಸಿಕ್ಕ ಕೆಲಸಗಾತಿಯರನ್ನು ಡಿಕ್ಕಿಹೊಡೆದು ಕೆಡವಿ, ನಗರವನ್ನು ಮಲಿನಗೊಳಿಸುತ್ತಿರುವ ಜೇನುಗಳ

ಮೇಲೆ ಬಿದ್ದು, ನಗರದ ಬಾಗಿಲಲ್ಲಿರುವ ಕಾವಲು ಕಾಯುವ ಜೇನುಹುಳುಗಳನ್ನು ಪಕ್ಕಕ್ಕೆ ತಳ್ಳಿ ಹೊರ ಬರುತ್ತವೆ. ನಗರದಿಂದ ಹಾರಿ, ಹತ್ತಿರದ ಹೂಗಳ ಮೇಲೆ ಮಲಗಿ ನಲಿದು ಸಂಜೆಯ ತಂಗಾಳಿ ಬೀಸುವ ವೇಳೆಗೆ ನಗರಕ್ಕೆ ಮರಳುತ್ತವೆ. ಅದೇ ಅವುಗಳ ಉದ್ಧಟ ತನ, ನಯವಿಲ್ಲದ ನಡತೆ, ಜವಾಬ್ದಾರಿ ರಹಿತ ಜೀವನ ವಾಗಿದೆ. ನಗರಕ್ಕೆ ಪ್ರವೇಶಿಸಿ ಭಂಡಾರಕ್ಕೆ ದಾಳಿಯಿಟ್ಟು ಬಂಡುಂಡು, ಬೆಳಗಿನ ದಾಳಿಗೆ ಶಕ್ತಿಗಳಿಸಲು ವಿಶ್ರಾಂತಿ ನಿಲಯಕ್ಕೆ ತೆರಳಿ ನಿದ್ರೆ ಹೋಗುತ್ತವೆ. ಬೆಳಗಾಗುತ್ತಲೆ ಗಂಡುಗಳ ಹಿಂಡಿನ ದಾಳಿ ಪ್ರಾರಂಭವಾಗುತ್ತದೆ. ಗಂಡು ಜೇನುಗಳ ಈ ವರ್ತನೆ ಕೆಲಸಮಾಡುವ ಜೇನುಗಳಿಗೆ ಕೋಪವನ್ನು ಉಂಟುಮಾಡುತ್ತದೆ. ಕೆಲಸಗಾರ ಜೇನು ಗಳ ಶಾಂತಿ ಬಹಳ ಕಾಲ ಉಳಿಯುವುದಿಲ್ಲ. ನಗರದಲ್ಲಿ ರಾಣಿ ಮೊಟ್ಟೆ ಇಡಲು ಪ್ರಾರಂಭಮಾಡಿದಂದಿನಿಂದ ಹುಳುಗಳ ಸಂಖ್ಯೆ ಹೆಚ್ಚುತ್ತಾ ಹೋಗುತ್ತದೆ. ಗಂಡು ಗಳ ಹಾವಳಿಯಿಂದ ಆಹಾರದ ಕೊರತೆಯ ಹೆದರಿಕೆಯೂ ತಲೆದೋರಬಹುದು. ಗಂಡುಗಳ ಉಂಡಾಡಿ ಜೀವನ ಬೆಳದಂತೆ, ಅವುಗಳ ಉದ್ಧಟತನ ಹೆಚ್ಚಿದಂತೆ, ಜೇನು ಬಳಗಕ್ಕೆ ಈ ಗಂಡು ಜೇನುಗಳು ಪ್ರಯೋಜನಕ್ಕೆ ಬಾರ ದವು ಎಂಬುದು ಅರಿವಾಗುತ್ತದೆ. ಒಂದು ಮುಂಜಾವಿ ನಲ್ಲಿ ಜೇನುಗಳು ಒಮ್ಮತದ ಸುಗ್ರೀವಾಜ್ಞೆಯನ್ನು ಹೊರ ಡಿಸುತ್ತವೆ. ಈ ಆಜ್ಞೆ ಗುಂಪಿನಿಂದ ಗುಂಪಿಗೆ ನಗರದ

ಕೆಲಸಗಾರರಿಗೆಲ್ಲಾ ಜಾರಿಯಾಗುತ್ತದೆ. ಆಗ ಕೆಲಸ
ಗಾತಿಯರಾದ ಜೇನುಗಳ ಸಹನೆ ಸಡಿಲವಾಗಿ, ಕೂಡಿಟ್ಟ
ಕೋಪ ಕೋಡಿಯೊಡೆದು ಹರಿಯುತ್ತದೆ. ಮಧು
ಉಂಡು ಮತ್ತೇರಿ ಮಲಗಿದ ಗಂಡುಗಳ ಹಿಂಡಿನಮೇಲೆ
ಕೋಪೋದ್ರೇಕದಿಂದ ಕೆಲಸಗಾತಿಯರಾದ ಜೇನುಹುಳು
ಗಳು ಹಠಾತ್ತನೆ ಬೀಳುತ್ತವೆ. ಕಷ್ಟವಿಲ್ಲದ, ದುಡಿಮೆ
ತಿಳಿಯದ ಜೀವನವನ್ನು ಸವಿದು, ಯಾರ ಭಯ,
ಭೀತಿಯೂ ಇಲ್ಲದೆ ಉಂಡು ಅಲೆಯುತ್ತಿದ್ದ ಈ ಗಂಡು
ಜೇನುಗಳು ತಮ್ಮ ಕಣ್ಣುಗಳನ್ನೆ ತಾವು ನಂಬದಂತಾಗು
ತ್ತವೆ. ಅವು ಭ್ರಮೆಗೊಂಡು ದಿಕ್ಕು ದಿಕ್ಕಿಗೆ ಓಡಲೆತ್ನಿ
ಸುತ್ತವೆ. ಪ್ರತಿಭಟಿಸುವ ಧೈರ್ಯ, ಆತ್ಮರಕ್ಷಣೆ ಮಾಡಿ
ಕೊಳ್ಳುವ ಸ್ಥೈರ್ಯ ಇಲ್ಲದೆ ಮಂಕು ಮಂಕಾಗಿ ಓಡುತ್ತವೆ.
ಆದರೆ ಎಲ್ಲ ಕಡೆಯಿಂದಲೂ ರೊಚ್ಚೆದ್ದ ಕೆಲಸಗಾತಿಯ
ರಾದ ಜೇನುಗಳು ಮೇಲೇರಿ ಬರುತ್ತವೆ. ಬೆದರಿದ
ಗಂಡು ಜೇನುಗಳಲ್ಲಿ ಕೆಲವು ಮಕರಂದ ತುಂಬಿರುವ
ಉಗ್ರಾಣಗಳ ಕಡೆ ನುಗ್ಗುತ್ತವೆ. ಆದರೆ ಪ್ರತಿನಿತ್ಯದಂತೆ
ಪಕ್ಕಕ್ಕೆ ಸರಿದು ನಿಲ್ಲುವ ವಿನಯದ ಕಾವಲುಗಾರರು ಇಂದು
ಅಲ್ಲಿಲ್ಲ—ಪ್ರಜಾ ಪ್ರಭುತ್ವದಆಜ್ಞೆಯನ್ನು ಚಾಚೂ
ತಪ್ಪದೆ ಪಾಲಿಸುವ ಶಿಸ್ತಿನಸಿಪಾಯಿಗಳು ಈ ಗಂಡು
ಜೇನುಗಳನ್ನು ಕೊಲ್ಲಲುಮೇಲೇರಿ ಬರುತ್ತಾರೆ. ಪುಷ್ಪ
ಪರಾಗ, ಮಕರಂದ ಸಾರಿಗೆಯನ್ನು ನಿಲ್ಲಿಸಿ, ಪ್ರಜಾ
ಪ್ರಭುತ್ವದ ಸುಗ್ರೀವಾಜ್ಞೆಯನ್ನು ಕಾರ್ಯಗತಮಾಡು

ಜವಾಬ್ದಾರಿಯನ್ನು ಹೊತ್ತು ಕೆಲವು ಕೆಲಸಗಾತಿಯರಾದ ಜೇನುಗಳು ಗುಂಪು ಗುಂಪಾಗಿ ಗಂಡು ಜೇನುಗಳ ಮೇಲೆ ಬೀಳುತ್ತವೆ. ಒಂದೊಂದು ಗಂಡು ಜೇನನ್ನು ಐದಾರು ಕೆಲಸಗಾತಿಯರಾದ ಜೇನುಗಳು ಮುತ್ತಿ, ರೆಕ್ಕೆಗಳನ್ನು ಕಿತ್ತು, ಭೀತಿಯಿಂದ ನಡಗುತ್ತಿರುವ ಅಘ್ರಾಣ ಶಲಾಕೆಗಳನ್ನು ತುಂಡು ತುಂಡು ಮಾಡಿ, ಕಣ್ಣುಗಳನ್ನು ಕಿತ್ತು, ನಡುವನ್ನು ಕತ್ತರಿಸಿ, ವಿಷದ ಮುಳ್ಳುಗಳಿಂದ ಚುಚ್ಚಿ ಕೊಲ್ಲುತ್ತವೆ. ಈ ಕಗ್ಗೊಲೆಗೆ ಕಾರಣವೇನೆಂದು ಗಂಡು ಜೇನುಗಳು ಯೋಚಿಸುವುದರೊಳಗೆ ಭೀಷಣ ರುದ್ರನಾಟಕ ಕೊನೆಗಾಣುತ್ತದೆ. ಈ ಕಗ್ಗೊಲೆಯಲ್ಲಳಿದ ಗಂಡುಗಳ ದೇಹಗಳನ್ನು ಎತ್ತಿ ನಗರದಿಂದ ಹೊರಕ್ಕೆ ಹಾಕಿ ಕೆಲಸಗಾತಿಯರಾದ ಜೇನುಗಳು ನಗರವನ್ನು ಶುಚಿಗೊಳಿಸುತ್ತವೆ.

ಆಕಾಶದ ಅನಂತತೆಯಲ್ಲಿ ಮಿಂಚಿನಂತೆ ನಲಿದು, ಕುಮಾರಿ ರಾಣಿಯನ್ನು ಕೂಡುವ ಸಂತಸದಿಂದ ಸೊಕ್ಕೇರಿದ ಗಂಡುಗಳ ರೆಕ್ಕೆಗಳು ಹರಿದು ಚಿಂದಿ ಚಿಂದಿಯಾಗುತ್ತವೆ. ಕೆಲಸಗಾತಿಯರು ಕಷ್ಟಪಟ್ಟು ಬಿಡುವಿಲ್ಲದೆ ದುಡಿದು, ಜನಾಂಗದ ಹಿತಕ್ಕಾಗಿ ಸುವರ್ಣ ಗಿಂಡಿಗಳಲ್ಲಿ ಕೂಡಿಟ್ಟ ಸವಿಯಾದ ಮಕರಂದವನ್ನು ಇತಿಮಿತಿ ಇಲ್ಲದೆ ಹೀರಿ ನಲಿಯುತ್ತಿದ್ದ ಆ ಗಂಡು ಜೇನುಗಳ ನಾಲಿಗೆಗಳು ಸೀಳಿಹೋಗುತ್ತವೆ. ಕುಮಾರಿ ರಾಣಿಯು ಮೈಯಿಂದ ಹೊರಹೊಮ್ಮಿದ ಮಾಟದ ಮಲ್ಲಿಗೆಯ ಸುಗಂಧವನ್ನು

ಹೀರಿ ಸಂತಸ ಸಾಗರದಲ್ಲಿ ತೇಲಿದ ಅವುಗಳ ಆಘ್ರಾಣ
ಶಲಾಕೆಗಳು ತುಂಡು ತುಂಡಾಗಿ ಹೋಗುತ್ತವೆ. ನಯ
ವಿನಯದ ನಿಷ್ಠುರ ಕೆಲಸಗಾತಿಯರನ್ನು ಉದ್ಧಟತನ
ದಿಂದ ತಳ್ಳಿ ತುಳಿದ ಅವುಗಳ ಕಾಲುಗಳು ಮುರಿದು
ಹೋಗುತ್ತವೆ. ಸುಪುಷ್ಟ ಸುಂದರ ಕುಮಾರಿ ರಾಣಿಯ
ಪ್ಪೈ ಉಜ್ಜಿ ನಡೆದು, ಹೂ ಹಾಸಿಗೆಯಲ್ಲಿ ಮಲಗಿ
ನಲಿದು, ಬಂಗಾರದ ಗಿಂಡಿಗಳಲ್ಲಿ ಬಂಡುಂಡು ಕೊಬ್ಬಿ
ಬೆಳೆದ ಈ ಗಂಡು ಜೇನುಗಳು ಕಡೆಗೆ ಸಾವನ್ನಪ್ಪುತ್ತವೆ.
ಸುಂದರ ಚೈತ್ರದ ಚಿತ್ರವನ್ನು ತಮ್ಮ ಚಿತ್ತದಲ್ಲಿ ಚಿತ್ರಿಸಿ
ಕೊಂಡು, ಈಗ ತಮ್ಮ ಕಣ್ಣುಗಳಲ್ಲಿ ದುಃಖದ ಹೊನಲು
ಹರಿಸುತ್ತಿರುವ ಅರೆಜೀವದ ಈ ಗಂಡುಗಳ ಹಿಂಡನ್ನು
ದುಡಿಮೆಯ ಜೇನುಗಳು ಒಂದು ಮೂಲೆಗೆ ತಳ್ಳಿ, ಅವು
ಸಾವನ್ನಪ್ಪುವವರೆಗೂ ಸರ್ಪಗಾವಲನ್ನು ಹಾಕುತ್ತವೆ.
ಕಗ್ಗೊಲೆಯ ಕೋಲಾಹಲದಲ್ಲಿ ಕೆಲವು ಗಂಡುಗಳು
ನಗರ ದ್ವಾರವನ್ನು ಸೇರಿ ಹೇಗೊ ತಪ್ಪಿಸಿಕೊಂಡು
ಹೊರಹೋಗುತ್ತವೆ. ಆದರೆ ದುಡಿದುಣ್ಣುವ ಅಭ್ಯಾಸ
ವಿಲ್ಲದ ಈ ಸೋಮಾರಿಗಳು ಹಸಿವಿನಿಂದ ಪರಿತಪಿಸುತ್ತ
ಸಾಯಂಕಾಲ ನಗರ ದ್ವಾರಕ್ಕೆ ಬರುತ್ತವೆ. ಶಿಸ್ತಿನಿಂದ
ಕಾವಲುಕಾಯುತ್ತಿರುವ ಜೇನುಗಳು ನಗರ ಪ್ರವೇಶಕ್ಕೆ
ಅವಕಾಶ ಕೊಡದೆ ಹೊರಗಟ್ಟುತ್ತವೆ. ಮರುದಿನ ಬೆಳಿಗ್ಗೆ
ಈ ನಿಷ್ಪ್ರಯೋಜಕ ಗಂಡುಗಳ ಶವಗಳನ್ನೆಲ್ಲಾ ಹೊತ್ತೊ
ಗೆದು ಕೆಲಸಗಾತಿಯರಾದ ಜೇನುಗಳು ಪುಷ್ಪಪರಾಗ,

ಮಕರಂದ ಸಂಪಾದನೆಗೆ ಹೊರಡುತ್ತವೆ. ಸೋಮಾರಿಗಳ ಸಂತಾನ ಅಳಿದು, ಕಷ್ಟಜೀವಿಗಳ ಈ ಚಿಕ್ಕ ಪ್ರಜಾ ಪ್ರಭುತ್ವದಲ್ಲಿ ಶಿಸ್ತು, ಶಾಂತಿ ವೃದ್ಧಿಗೊಳ್ಳುತ್ತವೆ.

ಪ್ರಜಾಪ್ರಭುತ್ವವಿರುವ ಕೆಲವು ನಗರಗಳಲ್ಲಿ ದುಡಿಮೆಯ ಜೇನುಗಳು ಕಗ್ಗೊಲೆಯ ಭೀಕರ ಆಜ್ಞೆಯನ್ನು ಹೊರಡಿಸದೆ ಸೋಮಾರಿ ಗಂಡುಗಳ ಹಿಂಡು ನಗರ ತ್ಯಜಿಸಿ ಹೋಗಲು ಆಜ್ಞೆ ಹೊರಡಿಸಬಹುದು. ಆಗ ಕೆಲಸಗಾರ ಜೇನುಗಳು ಹಠಾತ್ತನೆ ಗಂಡುಗಳ ಹಿಂಡನ್ನು ಸುತ್ತುಗಟ್ಟಿ ಸೆರೆಹಿಡಿದುನಗರದ್ವಾರದಿಂದ ಹೊರದಬ್ಬುತ್ತವೆ. ದ್ವಾರ ಪಾಲಕ ಜೇನುಗಳು ತಕ್ಷಣ ಕಾವಲನ್ನು ಬಿಗಿಮಾಡಿ ಈ ಗಂಡುಗಳನ್ನು ಮತ್ತೆ ನಗರ ಪ್ರವೇಶಿಸಲು ಬಿಡುವುದಿಲ್ಲ.

ಮಾನವನ ಪ್ರಪಂಚದಲ್ಲಿ ಸೋಮಾರಿಗಳ, ಉಂಡಾಡಿಗಳ ಹಿಂಡಿಗೇನೂ ಕಡಮೆ ಇಲ್ಲ. ಕೆಲವು ರಾಷ್ಟ್ರಗಳಲ್ಲಿ ಈ ರಸಿಕ ಉಂಡಾಡಿಗಳ ರಕ್ತದ ಕಾಲುವೆ ಹರಿದಿದೆ. ಅನೇಕ ರಾಷ್ಟ್ರಗಳಲ್ಲಿ ಈ ಉಂಡಾಡಿಗಳ ತಂಡಗಳು ಇನ್ನೂ ಇವೆ. ಜೇನುಹುಳುಗಳ ನೀತಿಯನ್ನನುಸರಿಸಿ ಕೊಲೆಯ ಬಲೆಯನ್ನು ಬೀಸಿ ಈ ಉಂಡಾಡಿಗಳನ್ನು ಕಬಳಿಸುವ ನೀತಿ ಕೆಲವು ರಾಷ್ಟ್ರಗಳದ್ದಾದರೆ, ಶಿಸ್ತಿನ ಸರಳ ಶಾಂತಿಯ ಕ್ರಾಂತಿಯಿಂದ ಉಂಡಾಡಿಗಳ ಮನಬೆಳಗಿ ಅವರನ್ನು ಸಮಾಜದ ಸತ್ಪ್ರಜೆಗಳನ್ನಾಗಿ ಮಾಡುವ ನೀತಿ ಕೆಲವು ರಾಷ್ಟ್ರಗಳದ್ದಾಗಿದೆ.

# ಬುದ್ಧಿ ಚಾತುರ್ಯ

ಪುಷ್ಪಪರಾಗ, ಮತ್ತು ಮಕರಂದ ಸಂಪಾದನೆಗೆ ಹೋದ ಕೆಲಸಗಾತಿ ಜೇನು ತನ್ನ ಯಾತ್ರೆಯಲ್ಲಿ ಭಾರಿ ಪುಷ್ಪಪರಾಗ, ಮಧುಸಂಗ್ರಹದ ಸ್ಥಳವನ್ನು ಕಂಡು, ಅಲ್ಲಿಂದ ಮಧುವನ್ನು ಹೊತ್ತು ತಂದು ಬಳಗದ ಭಂಡಾರ ದಲ್ಲಿ ತುಂಬುತ್ತದೆ. ಅಷ್ಟೇ ಅಲ್ಲದೆ ಅದು ಗೂಡಿನಲ್ಲಿ ರುವ ಹತ್ತಾರು ಕೆಲಸಗಾತಿಯರಿಗೆ ಪುಷ್ಕಳವಾಗಿ ಬೆಳೆದು ನಿಂತ ಪುಷ್ಪಗಳ ಸಂತೆಯ ಸಂತೋಷದ ಸುದ್ಧಿಯನ್ನು, ಆ ತಾವಿನ ವಿವರಗಳನ್ನು ತಿಳಿಸಿ, ಪುನಃ ಅಲ್ಲಿಗೆ ತೆರಳು ತ್ತದೆ. ಈ ಸುದ್ಧಿಯನ್ನು ತಿಳಿದ ಕೆಲಸಗಾತಿಯರಾದ ಜೇನುಗಳು ತಾವು ಇದುವರೆಗೂ ಕಾಣದಿದ್ದ ಪ್ರಕೃತಿಯ ಈ ಭಂಡಾರಕ್ಕೆ ಮುತ್ತಿಗೆ ಹಾಕುತ್ತವೆ.

ಬೇರೆ ರಾಣಿಯೊಂದು ನಗರಪ್ರವೇಶ ಮಾಡಿದಾಗ, ಉಂಡಾಡಿ ಗಂಡುಗಳ ಕೊಲೆಯ ಆಜ್ಞೆ ಹೊರಟಾಗ, ಮಧುರ ಮಕರಂದದ ನಿಧಿ ಸಿಕ್ಕಾಗ, ತಮ್ಮ ರಾಣಿಗೆ ಸಂಕಟ ಒದಗಿದಾಗ, ಹಿಂಡಿನಲ್ಲಿ ಜೊತೆಯ ಜೇನಿಗೆ ಶತ್ರುಗಳಿಂದ ಆಪತ್ತೊದಗಿದಾಗ, ಆ ಸುದ್ದಿ ಒಂದರಿಂದ ಒಂದಕ್ಕೆ, ಗುಂಪಿನಿಂದ ಗುಂಪಿಗೆ ಮಿಂಚಿನ ವೇಗದಲ್ಲಿ ಹರಡಿ ಪ್ರತಿಯೊಂದು ಕೆಲಸಗಾತಿ ಜೇನೂ ತನ್ನ ಕರ್ತವ್ಯ ವನ್ನು ನಿಷ್ಠೆಯಿಂದ ನೆರವೇರಿಸುತ್ತದೆ. ಜೇನು ಹುಳು ಗಳು ಆಘ್ರಾಣಶಲಾಕೆಗಳಿಂದ, ರೆಕ್ಕೆಗಳ ಚಲನೆಯಿಂದ,

ನಾನಾವಿಧ ನೃತ್ಯಗಳಿಂದ ತಮ್ಮ ಅಭಿಪ್ರಾಯಗಳನ್ನು ಜೊತೆಯ ಜೇನುಗಳಿಗೆ ತಿಳಿಸುತ್ತವೆ.

ಚೈತ್ರದ ಚೆಲವು ನಾನಾ ಬಗೆಯ ಗಿಡಗಳ ಹೂಗೊಂಚಲಲ್ಲಿ ನಲಿಯುವಾಗ ಕೆಲಸಗಾತಿಯರಾದ ಜೇನುಗಳು ತಮ್ಮ ಅವಶ್ಯಕತೆಯನ್ನು ಅರಿತು ತಮ್ಮ ನಗರಕ್ಕೆ ಬೇಕಾದ ಪುಷ್ಪಪರಾಗವನ್ನು ಮಾತ್ರ ಹೊತ್ತು ತರುತ್ತವೆ. ತಮಗೆ ಬೇಕಾದ ಜಾತಿಯ ಹೂಗಳನ್ನು ಮಾತ್ರ ಆರಿಸಿಕೊಳ್ಳುತ್ತವೆ. ಒಂದು ಗೊತ್ತಾದ ಜಾತಿಯ ಹೂಗಳಿಂದ ಸಂಗ್ರಹಿಸುವ ಒಂದು ಗುಂಪು ಪಕ್ಕದಲ್ಲೇ ಬೇರೆ ಜಾತಿಯ ಎಷ್ಟೇ ಹೂಗಳಿದ್ದರೂ ಅಕಡೆ ಗಮನ ಕೊಡದೆ, ಆ ದಿನವೆಲ್ಲಾ ತಾವು ಮೊದಲು ಮುತ್ತಿಟ್ಟ ಜಾತಿಯ ಹೂಗಳನ್ನೆ ಮುತ್ತುತ್ತವೆ. ಚಿಕ್ಕ ಗಿಡಗಳು, ಎತ್ತರದ ಬಳ್ಳಿಗಳು, ಉನ್ನತ ಮರಗಳು ಹೂಬಿಟ್ಟು ನಿಂತಾಗ ಶಕ್ತಿಯುತ ಕೆಲಸಗಾತಿಯರೇ ಎತ್ತರದ ಹೂಗೊಂಚಲುಗಳನ್ನು ಹೀರಿಬರುತ್ತಾರೆ. ಮಕರಂದವನ್ನು ಹೀರುವ ಕೆಲಸಗಾತಿಯು ೨೦%ಕ್ಕಿಂತ ಕಡಿಮೆ ಸಕ್ಕರೆ ಅಂಶವಿರುವ ಮಕರಂದವನ್ನು ಹೀರುವುದಿಲ್ಲ. ಈ ಅಳತೆಯ ಯಂತ್ರ ಎಲ್ಲಿಯದು? ಒಂದೇ ಜಾತಿಯ ಹೂಗಳನ್ನು ಕಂಡುಹಿಡಿಯುವ ಶಕ್ತಿ ಯಾವುದು?

ಸಂಪತ್ತಿನ ನಗರವನ್ನು ತ್ಯಾಗಮಾಡಿ ಹಳೆಯ ರಾಣಿಯೊಡನೆ ಹಿಂಡು ಹಾರಿಹೋಗುವ ಮೊದಲು, ನಗರವನ್ನು ಬಿಟ್ಟು ಹೋಗಬೇಕೆಂದು ಗೊತ್ತಾದ ಜೇನುಗಳು

ಹೊಟ್ಟೆ ಬಿರಿಯುವಂತೆ ಉಗ್ರಾಣಗಳಲ್ಲಿರುವ ಮಧುವನ್ನು ಹೀರುತ್ತವೆ—ಹೊರಡಲು ಬೇಗ ಸಿದ್ಧತೆ ಮಾಡಿಕೊಳ್ಳು ತ್ತವೆ. ಆದರೆ ನಗರದಲ್ಲೆ ಉಳಿದು ನಗರ ರಕ್ಷಣೆ, ಮರಿಗಳ ಪಾಲನೆಗೆ ಗೊತ್ತಾದ ಗುಂಪು ತನ್ನ ಕೆಲಸಗಳನ್ನು ನಿತ್ಯ ದಂತೆ ಮಾಡುತ್ತದೆ. ಈ ಗುಂಪು ನಗರವನ್ನು ತ್ಯಜಿಸ ಬೇಕು. ಈ ಗುಂಪು ನಗರದಲ್ಲಿ ಉಳಿಯಬೇಕು ಎಂದು ಗೊತ್ತುಮಾಡಿದವರು ಯಾರು?

ನಗರವನ್ನು ಬಿಟ್ಟು ಪುಷ್ಪಪರಾಗ, ಮತ್ತು ಮಕರಂದ ತರಲು ಆ ವರೆಗೂ ಕಾಣದಿದ್ದ ಹೊಸ ತಾಣವನ್ನು ಹುಡುಕಿಕೊಂಡು ದಿಕ್ಕು ದಿಕ್ಕಿಗೆ ಹೋದ ಕೆಲಸಗಾತಿ ಯರೂ, ಹೊಸ ನಗರ ನಿವೇಶನವನ್ನು ಹುಡುಕಲು ಬಹುದೂರ ಹೋದ ಮುಂದಳ ಗುಂಪಿನ ಕೆಲಸಗಾತಿ ಯರೂ ಸ್ವಲ್ಪವೂ ದಾರಿ ತಪ್ಪದೆ ತಮ್ಮ ನಿವಾಸಗಳನ್ನು ಬಂದು ಸೇರುತ್ತಾರೆ.

ಮೊಟ್ಟೆ ಇಡಲು ಪ್ರಾರಂಭಮಾಡಿದ ರಾಣಿ ಚಿಕ್ಕ ಮನೆಗಳಲ್ಲಿ ಕೆಲಸಗಾರ ಜೇನುಗಳು ಮಾತ್ರ ಜನ್ಮತಾಳು ವಂತಹ ಮೊಟ್ಟೆಗಳನ್ನೂ, ದೊಡ್ಡ ಮನೆಗಳಲ್ಲಿ ಗಂಡು ಜೇನುಗಳು ಮಾತ್ರ ಜನ್ಮತಾಳುವಂತಹ ಮೊಟ್ಟೆಗಳನ್ನೂ ಇಡುತ್ತಾಳೆ—ಅಲ್ಲದೆ ಬಳಗದ ಕಲ್ಯಾಣಕ್ಕೆ ಹೆಚ್ಚಿಗೆ ಕೆಲಸಗಾತಿಯರಾದ ಜೇನುಗಳು ಬೇಕು ಎನ್ನುವುದು ರಾಣಿಗೆ ತಿಳಿದಿರುವಂತೆ ತೋರುತ್ತದೆ. ಮೊಟ್ಟೆಯಿಡಲು ಮನೆಗಳಿಲ್ಲದೆ ತವಕಿಸುವ ರಾಣಿಗೆ (ರಾಣಿ ದಿನಕ್ಕೆ ೨೦೦-

೫೦೦೦ ವರೆಗೆ ಮೊಟ್ಟೆಗಳನ್ನಿಡುತ್ತಾಳೆ.) ಸುಲಲಿತವಾಗಿ ಬೇಗ ಕಟ್ಟಬಹುದಾದ ದೊಡ್ಡ ದೊಡ್ಡ ಮನೆಗಳನ್ನು ಕೆಲಸಗಾತಿಯರು ಕಟ್ಟುತ್ತಾ ಹೋಗುತ್ತಾರೆ. ಆದರೆ ಇತಿ ಮಿತಿ ಇಲ್ಲದಗಂಡು ಸಂತಾನವನ್ನು ಪಡೆಯಲು ಇಷ್ಟ ವಿಲ್ಲದ ರಾಣಿ ಕೆಲವೇ ದೊಡ್ಡ ಗೂಡುಗಳಲ್ಲಿ ಮಾತ್ರ ಮೊಟ್ಟೆಗಳನ್ನಿಟ್ಟು ಆಹಾರ ತುಂಬಿರುವ ಚಿಕ್ಕ ಮನೆಗಳ ಕಡೆ ಹೋಗುತ್ತಾಳೆ. ಆಗ ಕೆಲಸಗಾತಿಯರು ಆ ಉಗ್ರಾಣ ಗಳನ್ನು ತೆರವುಮಾಡಿ ಕೊಡುತ್ತಾರೆ. ರಾಣಿಯಲ್ಲಿರುವ ಅಂಡಾಣು ಮತ್ತು ಅವಳು ಗಂಡು ಜೇನಿನಿಂದ ಪಡೆದು ತನ್ನ ಗರ್ಭದಲ್ಲಿ ಇಟ್ಟುಕೊಂಡಿರುವ ವೀರ್ಯಕೋಶದಿಂದ ಬಂದ ಒಂದು ಜೀವಾಣು ಸೇರಿದ ಮೊಟ್ಟೆಯಿಂದ ಕೆಲಸ ಗಾತಿಯರಾದ ಜೇನುಗಳು ಜನ್ಮಪಡೆಯುತ್ತವೆ. ರಾಣಿಯ ಅಂಡಾಣುವಿನಿಂದ ಮಾತ್ರ ರೂಪ ತಾಳಿದ ಮೊಟ್ಟೆಯಿಂದ ಗಂಡು ಜೇನುಗಳು ಜನ್ಮಪಡೆಯುತ್ತವೆ. ಈ ಗಂಡು ಹೆಣ್ಣು ಜೀವಾಣುಗಳು ಸೇರುವಂತೆ, ಇಲ್ಲವೆ ಸೇರದಿರು ವಂತೆಮಾಡುವ ಶಕ್ತಿ ರಾಣಿಯಲ್ಲಿದೆ. ಒಂದು ಪಕ್ಷ ದೊಡ್ಡ ಗೂಡುಗಳಲ್ಲಿ ಮೊಟ್ಟೆ ಇಡುವಾಗ ರಾಣಿ ಕೆಲಸಗಾತಿಯ ರನ್ನು ಪಡೆಯುವ ಆಸೆಯಿಂದ ಗಂಡು ಹೆಣ್ಣು ಜೀವಾಣು ಗಳನ್ನು ಸೇರಿಸಿ ಮೊಟ್ಟೆಯನ್ನಿಟ್ಟರೂ ಈ ಗೂಡಿನ ಅಳತೆ ಪ್ರಮಾಣಗಳ ಪ್ರಭಾವದಿಂದ ಪರಿಪೂರ್ಣವಲ್ಲದ ಕೆಲಸ ಗಾತಿ ಜೇನು ಹುಟ್ಟುತ್ತದೆ. ಆದ್ದರಿಂದ ರಾಣಿ ಇಲ್ಲಿ ಹೆಚ್ಚಿಗೆ ಮೊಟ್ಟೆಯಿಡಲು ಇಷ್ಟಪಡುವುದಿಲ್ಲ.

ಜೇನುಗಳ ಗೂಡಿಗೆ ಒಂದು ಚಿಕ್ಕ ಇಲಿಯಾಗಲಿ, ದೊಡ್ಡ ಬಸವನ ಹುಳುವಾಗಲಿ ನುಗ್ಗಲು ಪ್ರಯತ್ನಿಸಿದರೆ ರಕ್ಷಣೆಯ ಭಾರವನ್ನು ಹೊತ್ತಿರುವ ಜೇನುಗಳು ತತ್‌ಕ್ಷಣ ಈ ಶತ್ರುಗಳನ್ನು ಸುತ್ತುಗಟ್ಟಿ ತಮ್ಮ ವಿಷಪೂರಿತ ಮುಳ್ಳುಗಳಿಂದ ಚುಚ್ಚಿ ಕೊಲ್ಲುತ್ತವೆ. ತಾವು ಎತ್ತಿ ಬಿಸುಡಲು ಸಾಧ್ಯವಿಲ್ಲದ ಈ ಶವಗಳನ್ನು ಅಲ್ಲಿಯೇ ಸಮಾಧಿ ಮಾಡುತ್ತವೆ. ಗಾಳಿಯಾಡಲವಕಾಶವಿಲ್ಲದಂತೆ ಭದ್ರವಾದ ಮೇಣದ ಗೋರಿಯನ್ನು ಕಟ್ಟುತ್ತವೆ. ಅರ್ಥಶಾಸ್ತ್ರ ಪ್ರವೀಣರಂತೆ ಈ ಜೇನುಗಳು ಹೆಚ್ಚಿಗೆ ಮೇಣವನ್ನು ವೃಥಾ ವ್ಯಯಮಾಡುವುದಿಲ್ಲ. ಬಸವನ ಹುಳುವಿನ ಸಮಾಧಿ ಮಾಡುವಾಗ ತೆರವಾದ ಚಿಪ್ಪಿನ ಭಾಗಗಳನ್ನು ಮಾತ್ರ ಭದ್ರವಾಗಿ ಮುಚ್ಚಿಬಿಡುತ್ತವೆ.

ಜೇನುಹುಳುಗಳ ಇನ್ನೂ ಅನೇಕ ಕೆಲಸ ಕಾರ್ಯಗಳು ಮಾನವನನ್ನು ಭ್ರಮೆಗೊಳಿಸುತ್ತವೆ.

## ನೃತ್ಯಗಾತಿಯರು

ಮನೆಗೆಲಸದಲ್ಲಿ ಇದ್ದ ಕೆಲಸಗಾತಿಯರಾದ ಜೇನುಗಳು ಇದ್ದಕ್ಕಿದಂತೆ ಹೊಸ ಹುರುಪಿನಿಂದ ಬೆಳಗಿನ ಬಾನಲ್ಲಿ ತೇಲುವ ಕರಿಯ ಚುಕ್ಕೆಗಳೇನೋ ಎನ್ನುವಂತೆ ಹಾರಿಹೋಗುತ್ತವೆ. ಬಹುದೂರದ ಯಾವುದೋ ಒಂದು

ಮೂಲೆಯಲ್ಲಿ ಯಾರ ಕಣ್ಣಿಗೂ ಬೀಳದೆ ಇದ್ದ ಹೂ ಹೊಲಕ್ಕೆ ಈ ಜೇನುಹುಳುಗಳು ಮಕರಂದ ಸೇವನೆಗೆ ಮುತ್ತಿಗೆ ಹಾಕುತ್ತವೆ. ಈ ಸಂಪತ್ತಿನ ನೆಲೆಯನ್ನು ಕಂಡುಹಿಡಿದವರಾರು? ಜೇನುಗಳ ಹಿಂಡಿಗೆ ಹೇಳಿದವ ರಾರು?

ಆಸ್ಟ್ರಿಯಾ ದೇಶದ ಪ್ರೊಫೆಸರ್ ಕಾರ್ಲ್ ವಾನ್ ಫ್ರಿಶ್ (Karl Van Frisch) ಎಂಬುವರು ಜೇನುಗಳ ಈ ಮೂಕ ಮಾತಿನ ಗುಟ್ಟನ್ನು ಮೊದಲು ಬಯಲಿಗೆ ತಂದರು. ಪುಷ್ಪಪರಾಗ ಸಂಪಾದನೆಗೆ ಹೋಗಿದ್ದ ಕೆಲಸ ಗಾತಿಯರಲ್ಲಿ ಕೆಲವರು ಈ ಸಂಪತ್ತಿನ ನೆಲೆಯನ್ನು ಸೇರು ತ್ತಾರೆ. ಸಾಮಾನ್ಯವಾಗಿ ಮುಂದಳ ಗುಂಪಿನ (Scout) ಕೆಲಸಗಾತಿಯರು ಈ ನೆಲೆಗಳನ್ನು ಹುಡುಕಿ, ಅಲ್ಲಿಂದ ಪುಷ್ಪಪರಾಗಗಳನ್ನು ಹೊತ್ತುಕೊಂಡು ಬಂದು ಉಗ್ರಾ ಣದ ಕೆಲಸಗಾತಿಯರಿಗೆ ಒಪ್ಪಿಸುತ್ತಾರೆ. ಈ ಜೇನು ಗಳಲ್ಲೊಂದು ಜೇನುಹುಟ್ಟಿಯ ಮೇಲುಭಾಗಕ್ಕೆ ಹತ್ತಿ ಕೆಲಸಗಾತಿಯರ ನಡುವೆ ನಿಂತು, ಪ್ರದಕ್ಷಿಣವಾಗಿ (Clock wise) ಇಲ್ಲವೆ ಅಪ್ರದಕ್ಷಿಣವಾಗಿ (Anti —clock wise) ಚಿಕ್ಕ ವೃತ್ತಗಳಲ್ಲಿ ತಿರುಗುತ್ತದೆ. ಈ ನೃತ್ಯಗಳ ಭಾವ, ಭಂಗಿ. ರೀತಿಗಳು ಜೇನುಹುಳು ಗಳ ಮಾತಿನ ಸಾಧನಗಳು. ಈ ನಾಟ್ಯರಾಣಿಯ ಸುತ್ತ ನೆರೆದಿರುವ ಕೆಲಸಗಾತಿಯರು ನೃತ್ಯಗಾತಿಯನ್ನು ಅನು ಸರಿಸಿ ತಮ್ಮ ಆಘ್ರಾಣ ಶಲಾಕೆಗಳಿಂದ ಅವಳ ಮೈಯನ್ನು

ಚಪ್ಪರಿಸುತ್ತಾರೆ. ಹೂ ಹೊಲದಿಂದ ಸುದ್ದಿಯನ್ನು ಹೊತ್ತು ತಂದ ಈ ನಾಟ್ಯರಾಣಿ ಕೆಲವು ಕ್ಷಣಗಳ ಕಾಲ ನಾಟ್ಯವಾಡಿ, ನಗರದ ಮತ್ತೊಂದು ಭಾಗಕ್ಕೆ ಹೋಗಿ ಇನ್ನೊಂದು ಗುಂಪಿನ ಮುಂದೆ ರಾಗಾಲಯ, ತಾಳಬದ್ಧವಾಗಿ ನಾಟ್ಯವಾಡಿ ತಾನು ತಂದ ಸುದ್ದಿಯನ್ನು ತಿಳಿಸುತ್ತಾಳೆ. ಈ ಗುಂಪಿನ ಜೇನುಗಳು ಮೊದಲ ಗುಂಪಿನ ಜೇನುಗಳಂತೆ ತಮ್ಮ ಆಘ್ರಾಣಶಲಾಕೆಗಳಿಂದ ನೃತ್ಯಗಾತಿಯ ಮೈಯನ್ನು ಚಪ್ಪರಿಸುತ್ತವೆ. ಈ ನಾಟ್ಯರಾಣಿ ಅನೇಕ ಗುಂಪುಗಳ ನಡುವೆ ನಾಟ್ಯವಾಡಿ, ಹೂ ನೆಲೆಯ ಸುದ್ಧಿಯನ್ನು ಸಾರಿ, ಪುನಃ ಅದೇ ಹೂ ಹೊಲಕ್ಕೆ ಹಾರಿ ಹೋಗುತ್ತದೆ. ಈ ನೃತ್ಯಗಾತಿಯಿಂದ ಸುದ್ದಿಯನ್ನು ತಿಳಿದ ಕೆಲಸಗಾತಿಯರು ತಾವು ಕಂಡರಿಯದ ಈ ಹೂ ಹೊಲವನ್ನು ನಿರಾಯಾಸವಾಗಿ ಸೇರಿ ಪುಷ್ಪಪರಾಗವನ್ನು ಹೊತ್ತು ತರುತ್ತಾರೆ. ಮನೆಯನ್ನು ಸೇರಿದ ಈ ಜೇನುಗಳು ತಾವು ಹೊತ್ತು ತಂದ ಮಧುವನ್ನು ಉಗ್ರಾಣಗಳಿಗೆ ಒಪ್ಪಿಸಿ ನಗರದ ಬೇರೆ ಬೇರೆ ಭಾಗಗಳಿಗೆ ಹೋಗಿ ನೃತ್ಯಮಾಡಿ ಅತುಲ ಸಂಪತ್ತಿನ ನೆಲೆಯ ಸುದ್ಧಿಯನ್ನು ಹರಡುತ್ತವೆ. ತರುವಾಯ ಜೇನು ಹಿಂಡು ಪುಷ್ಪಪರಾಗವನ್ನು ಮತ್ತು ಮಧುವನ್ನು ತರಲು ಹೊರಡುತ್ತದೆ.

ಮಕರಂದ ಇಲ್ಲವೆ ಪುಷ್ಪಪರಾಗ ಜೇನುಗಳಿರುವ ನಗರದ ಸಮೀಪದಲ್ಲಿದ್ದರೆ ಸಾಮಾನ್ಯ ಚಿಕ್ಕ ವೃತ್ತಗಳಲ್ಲಿ

ನಾಟ್ಯವಾಡಿ ಸುದ್ದಿಯನ್ನು ತಿಳಿಸುತ್ತವೆ. ಈ ಸ್ಥಳ ದೂರದಲ್ಲಿದ್ದರೆ ಇಂಗ್ಲಿಷ್ ಅಂಕೆಯ "ಎಂಟ" ನ್ನು ಹೋಲುವ ಪಥದಲ್ಲಿ ನೃತ್ಯಮಾಡುತ್ತವೆ. (Eight dance). ಈ "ಎಂಟು ನೃತ್ಯದ" ಪಥದ ಪ್ರತಿ ಅರ್ಧ ವೃತ್ತದ ತ್ರಿಜ್ಯ ಸಾಮಾನ್ಯ ನೃತ್ಯದಲ್ಲಿ ನಡೆಯುವ ಚಿಕ್ಕ ವೃತ್ತದ ಮೂರರಷ್ಟಿರುತ್ತದೆ—ನೃತ್ಯಗಾತಿ ಮೊದಲು ಎಡಕ್ಕೆ ಅರ್ಧವೃತ್ತ ನಂತರ ಸರಳರೇಖೆ, ಪುನಃ ಎಡಕ್ಕೆ ಅರ್ಧವೃತ್ತ . . . . ಹೀಗೆಯೇ "ಎಂಟು ನೃತ್ಯ ಪಥ ದಲ್ಲಿ" ನಾಟ್ಯವಾಡುತ್ತಾಳೆ. ಒಂದು ಸರಳರೇಖೆಯ ಮೇಲೆ ಚಲಿಸುವಾಗ ಈ ನೃತ್ಯಗಾತಿ ತನ್ನ ಉದರವನ್ನು ವೈಯ್ಯಾರದಿಂದ ಕುಣಿಸುತ್ತಾಳೆ.

ಜೇನುಹುಳುಗಳ ಈ ಮೂಕ ಮಾತಿನಲ್ಲಿ ನೃತ್ಯದ ರೀತಿಗಲ್ಲದೆ ಕಾಲಕ್ಕೂ ಗೊತ್ತಾದ ಅರ್ಥಗಳಿವೆ. "ಎಂಟು ನೃತ್ಯ"ದ ಪಥದಲ್ಲಿ ಒಂದು ಜೇನುಹುಳು ನಾಟ್ಯವಾಡು ವಾಗ ಕಾಲು ನಿಮಿಷದಲ್ಲಿ ಹನ್ನೊಂದು ಅರ್ಧ ವೃತ್ತ ಗಳಲ್ಲಿ ಚಲಿಸಿದರೆ ತಾನು ತಿಳಿಸುವ ಭಂಡಾರವಿರುವ ಸ್ಥಳ ಸಮೀಪದಲ್ಲೇ ಇದೆ, ಅಂದರೆ ಸುಮಾರು ೧೫೦ ಗಜಗಳ ದೂರದಲ್ಲಿದೆ ಎಂದು ಅರ್ಥವಾಗುವುದು. ಹೀಗೆ ಭಂಡಾ ವಿರುವ ಸ್ಥಳದ ದೂರ ಹೆಚ್ಚಿದಂತೆ ಈ ಅರ್ಧವೃತ್ತಗಳ ಸಂಖ್ಯೆ ಕಡಮೆಯಾಗುತ್ತದೆ. ಅಲ್ಲದೆ ಸರಳ ರೇಖೆಯಲ್ಲಿ ನರ್ತಿಸುವಾಗ ಉದರದ ಚಲನೆಯ ವೇಗ ಹೆಚ್ಚು ಕಡಮೆ ಯಾಗುತ್ತದೆ.

ಹೀಗೆ ನಾಟ್ಯದ ಮಾತಿನಲ್ಲಿ ಮಧು ಭಂಡಾರವಿರುವ ಸ್ಥಳವನ್ನು ಮಾತ್ರ ತಿಳಿದ ಕೆಲಸಗಾತಿಯರು ಈ ಸ್ಥಳದ ದಿಕ್ಕನ್ನು ತಿಳಿಯದಿದ್ದರೆ ಭಂಡಾರವಿರುವ ನೆಲೆಯನ್ನು ಸೇರುವುದು ಕಷ್ಟ. ಮಧುಭಂಡಾರವಿರುವ ಜಾಗ ಜೇನು ಗಳ ಗೂಡಿಗೆ ಸಮೀಪದಲ್ಲಿಲ್ಲದಾಗ ಮಾತ್ರ ನೃತ್ಯಗಾತಿ ದಿಕ್ಕನ್ನು ಸೂಚಿಸುತ್ತಾಳೆ. ಸುದ್ದಿತಂದ ಜೇನು ನರ್ತಿ ಸುವ ಕಾಲದಲ್ಲಿ ಸೂರ್ಯನಿರುವ ಸ್ಥಳ, ಜೇನು ಗೂಡಿರುವ ಜಾಗ, ಆಹಾರಕ್ಕಾಗಿ ಅವು ಹೋಗಬೇಕಾದ ನೆಲೆ—ಈ ಮೂರು ಸ್ಥಳಗಳು ಒಂದು ತ್ರಿಕೋನದ ಮೆಲ್ಭಾಗವನ್ನು ಸೂಚಿಸುತ್ತವೆ. ಜೇನುಗಳಿರುವ ಗೂಡು ಮತ್ತು ಆಹಾರ ಇರುವ ಸ್ಥಳವನ್ನು ಸೇರಿಸುವ ಸರಳ ರೇಖೆ, ಜೇನು ಗೂಡು ಮತ್ತು ಸೂರ್ಯನನ್ನು ಸೇರಿಸುವ ಸರಳ ರೇಖೆ ಗಳಿಂದಾದ ಕೋನ ಆಹಾರ ಇರುವ ಸ್ಥಳದ ದಿಕ್ಕನ್ನು ಸೂಚಿಸುವ ಸಂಕೇತಗಳಾಗಿರುತ್ತವೆ. ದಿನದಲ್ಲಿ ಸೂರ್ಯ ನಿರುವ ಸ್ಥಳ ಬದಲಾಗುತ್ತಿರುವುದರಿಂದ ಒಂದೇ ಸ್ಥಳ ಇರುವ ದಿಕ್ಕನ್ನು ತಿಳಿಸುವ ನೃತ್ಯ ದಿನದ ಬೇರೆ ಬೇರೆ ವೇಳೆಯಲ್ಲಿ ಬೇರೆ ಬೇರೆಯಾಗಿರುತ್ತದೆ. ಜೇನುಗಳ ಮೂಕ ಮಾತಿಗೆ ಸಂಬಂಧಿಸಿದ ಇನ್ನೂ ಅನೇಕ ವಿಷಯಗಳು ಜಟಿಲವಾಗಿವೆ.

ಮುಂದಳದ ಜೇನೊಂದು ಹೇರಳವಾಗಿ ಉತ್ತಮ ಆಹಾರ ಇರುವ ಜಾಗದ ಸುದ್ದಿಯನ್ನು ತಿಳಿಸು ವಾಗ ನರ್ತಿಸುತ್ತದೆ. ಆಗ ಸುದ್ದಿಯನ್ನು ತಿಳಿ

ಯುಲು ಸೇರಿದ ಕೆಲಸಗಾತಿಯರು ನಾಟ್ಯಗಾತಿಯನ್ನು ಅನುಸರಿಸಿ ತಮ್ಮ ಆಘ್ರಾಣ ಶಲಾಕೆಗಳಿಂದ ಅವಳ ಮೈ ಯನ್ನು ಚಪ್ಪರಿಸುತ್ತಾರೆ. ಹೀಗೆ ಆಘ್ರಾಣ ಶಲಾಕೆ ಗಳಿಂದ ಅವಳ ಮೈಯನ್ನು ಚಪ್ಪರಿಸುವಾಗ ನಾಟ್ಯ ರಾಣಿಯ ಮೈಗೆ ಅಂಟಿರುವ ಪುಷ್ಪಪರಾಗದ ವಾಸನೆ ಯನ್ನು ಹೀರಿ ತಾವು ಹುಡುಕಬೇಕಾದ ಹೂವಿನ ಜಾತಿ ಯನ್ನು ತಿಳಿಯುತ್ತಾರೆ ನಾಟ್ಯಮುಗಿದ ನಂತರ ಆಘ್ರಾಣ ಶಲಾಕೆಗಳನ್ನು ಚೆನ್ನಾಗಿ ಒರಸಿಕೊಂಡು ಮುಂ ದಳದ ಜೇನು ತಿಳಿಸಿದ ಹೂ ಹೊಲವನ್ನು ಹುಡುಕಿ ಕೊಂಡು ಹೋಗುತ್ತಾರೆ. ದಾರಿಯಲ್ಲಿ ಎಷ್ಟೇ ರಸಭರಿತ ಹೂವಿನ ಸಂತೆ ನೆರೆದಿದ್ದರೂ ಎಲ್ಲೂ ಇಳಿಯದೆ ತಮ್ಮ ಸಹೋದರಿ ತಿಳಿಸಿದ ಸ್ಥಳಕ್ಕೇ ಬಂದು ಇಳಿಯುತ್ತಾರೆ. ಸುದ್ದಿಯನ್ನು ಈ ಗುಂಪಿಗೆ ತಿಳಿಸಿದ ಜೇನು ಮಕರಂದ ವನ್ನು ಹೀರುವಾಗ ತನ್ನ ವಾಸನೆಯ ಗ್ರಂಥಿಗಳಿಂದ ತಾನು ಕುಳಿತ ಹೂವುಗಳ ಮೇಲೆ ತನ್ನ ಬಳಗಕ್ಕೆ ನಿಶಿಷ್ಟ ವಾದ ವಾಸನೆಯನ್ನು ಬಿಟ್ಟು ಬಂದಿರುತ್ತದೆ. ಈ "ಬಳ ಗದ ವಾಸನೆ" ಹೊಸ ತಂಡದವರು ತಮಗೆ ಬೇಕಾದ ಹೂ ಹೊಲವನ್ನು ಕಂಡುಹಿಡಿಯಲು ಸಹಾಯಕವಾಗು ತ್ತದೆ.

ಎಂದೂ ಕಾಣದಿದ್ದ ದೂರದ ತಾಣಕ್ಕೆ ಹೋಗಿ ಪುಷ್ಪ ಪರಾಗ ಮಕರಂದವನ್ನು ಹೊತ್ತು ತರುವ ಕೆಲಸಗಾತಿ ಯರು ಸೂರ್ಯನ ನೆಲೆಯಿಂದ ದಿಕ್ಕನ್ನು ತಿಳಿದು ತಮ್ಮ

ಮನೆಯ ಕಡೆ ಹಾರಿಬರುತ್ತಾರೆ. ಮಾನವನಿಗೆ ಸೂರ್ಯನು ಕಾಣದಿರುವಾಗಲೂ ಸಹ ಜೇನುಗಳು ಸೂರ್ಯನಿರುವ ದಿಕ್ಕು ಮತ್ತು ನಿರ್ದಿಷ್ಟ ಸ್ಥಳವನ್ನು ತಿಳಿಯುತ್ತವೆ. ಮೇಲೆ ಹಾರುತ್ತಿರುವ ವಿಮಾನ, ವಿಮಾನ ನಿಲ್ದಾಣ ಒಂದರಲ್ಲಿ ಇಳಿಯಲು ಆ ವಿಮಾನ ನಿಲ್ದಾಣದವರು ಸಂಕೇತ ಸುದ್ದಿಯನ್ನು ಕಳುಹಿಸುವಂತೆ ಮನೆಯ ಕಡೆ ಹಾರಿಬರುತ್ತಿರುವ ಜೇನುಗಳಿಗೆ ಮಾನವನ ಕಿವಿಗಳು ಕೇಳಲಾರದ ಅತಿ ಸೂಕ್ಷ್ಮ ಧ್ವನಿಯಲ್ಲಿ (Supersonic Signals) ಸಂಕೇತ ಸುದ್ದಿಯನ್ನು ಮನೆಯಲ್ಲಿರುವ ಜೇನುಗಳು ಕಳುಹಿಸುತ್ತವೆ.

ಜೇನುಗಳು ನೃತ್ಯ ಕಲೆಯನ್ನು ವಿಚಾರವಿನಿಮಯ ಸಾಧನವನ್ನಾಗಿ ಇಟ್ಟುಕೊಂಡಿವೆ. ಎಲ್ಲಾ ಸಮಾಚಾರ ಗಳನ್ನೂ ನಾಟ್ಯವಾಡಿ ತಿಳಿಸುತ್ತವೆ. ಜೇನುಗಳ ಭಾಷೆಯ ವಿಷಯವೇ ಒಂದು ಉದ್ಗ್ರಂಥವಾಗುತ್ತದೆ.

## ಹಾಲ್ಜೇನು - ಹಾಲಾಹಲ

ಕೆಲಸಗಾತಿಯರು ಹೂಗಳಿಗೆ ಮುತ್ತಿಟ್ಟು ಹೀರಿತರುವ ಮಕರಂದ "ಜೇನುತುಪ್ಪ" ಅಲ್ಲ. ಕೆಲಸಗಾತಿಯರು ಹೀರಿದ ಮಕರಂದದಲ್ಲಿ ೮೦% ವರೆಗೂ ನೀರಿನ ಅಂಶ ವಿರುತ್ತದೆ, ೨೦% ಕ್ಕಿಂತ ಕಡಮೆ ಇಲ್ಲದೆ ಸಕ್ಕರೆ ಇರು

ತ್ತದೆ. ಈ ಹಸಿಯ ಮಕರಂದ ಕೆಲಸಗಾತಿ ಜೇನಿನ ಒಳಗಿನ ಹೊಟ್ಟೆಯನ್ನು ಸೇರಿ ಅನೇಕ ರಾಸಾಯನಿಕ ಬದಲಾವಣೆಗಳನ್ನು ಹೊಂದಿ, ನಂತರ ಜೇನುಗೂಡು ಗಳಲ್ಲಿ ಕೂಡಿಟ್ಟಾಗ ಹೆಚ್ಚಾದ ನೀರಿನ ಅಂಶವೆಲ್ಲಾ ಆವಿ ಯಾಗಿ, ಮಾಗಿ, ಹಿತವಾದ ಮಧುರ ಜೇನುತುಪ್ಪವಾಗು ತ್ತದೆ. ಜೇನುತುಪ್ಪದಲ್ಲಿ ೮೦% ಸಕ್ಕರೆ, ಸ್ವಲ್ಪ ಅನ್ನಾಂಗ ಗಳು, ಸ್ವಲ್ಪ ಪ್ರೊಟೀನ್ ಇರುತ್ತದೆ.

"ಜೇನುತುಪ್ಪ" ರುಚಿಕರವಾದ, ಹಿತಕರವಾದ ಮತ್ತು ಸುಲಭವಾಗಿ ರಕ್ತಗತವಾಗುವ ಆಹಾರ. ಗಾಯ ಗಳನ್ನು ಮಾಯಿಸುವ, ರೋಗಿಗಳನ್ನು ಗುಣಪಡಿಸುವ ಕೆಲವು ಶ್ರೇಷ್ಠ ಗುಣಗಳು ಜೇನುತುಪ್ಪದಲ್ಲಿವೆ. ಸಸ್ಯಗಳ ಬೆಳವಣಿಗೆಯನ್ನು ಉತ್ತೇಜನಗೊಳಿಸುವ ವಸ್ತುವಿಶೇಷ ಗಳು ಜೇನುತುಪ್ಪದಲ್ಲಿವೆ. ಕತ್ತರಿಸಿದ ಕೊಂಬೆಗಳಿಂದ ಬೆಳೆಯಿಸಬಹುದಾದ ಗುಲಾಬಿ ಮೊಲಾದ ಗಿಡಗಳನ್ನು, ಕತ್ತರಿಸಿ ಜೇನುತುಪ್ಪದಲ್ಲಿ ಅದ್ದಿ ನೆಟ್ಟರೆ ಬೇಗ ಚೆನ್ನಾಗಿ ಬೇರುಬಿಡುತ್ತವೆ.

"ಜೇನು ರೊಟ್ಟಿ" (Bee-Bread) ಯಲ್ಲಿ ಕ್ಯಾನ್ ಸರ್ ಮಹಾರೋಗವನ್ನು ನಿವಾರಿಸುವ ವಸ್ತು ವಿಶೇಷ ಗಳು ಇರಬಹುದೆಂದು ವಿಜ್ಞಾನಿಗಳು ಸಂಶೋಧನೆಯಲ್ಲಿ ತೊಡಗಿದ್ದಾರೆ. "ಕ್ಯಾನ್‌ಸರ್ ರೋಗಕ್ಕೆ ಸುಲಭವಾಗಿ ತುತ್ತಾಗಬಹುದಾದ ಮೂರು ಗುಂಪು ಇಲಿಗಳನ್ನು ಬೇರೆ ಬೇರೆ ಇಟ್ಟು. ಈ ಮೂರು ಗುಂಪಿನಲ್ಲಿರುವ ಎಲ್ಲಾ ಇಲಿ

ಗಳಿಗೂ ಇನಾಕ್ಯುಲೇಶನ್ನಿನಿಂದ ರೋಗವನ್ನುಂಟುಮಾಡಿ, ಮೊದಲನೆಯ ಗುಂಪಿಗೆ "ಜೇನು ರೊಟ್ಟಿ" ಯನ್ನೂ, ಎರಡನೆಯ ಗುಂಪಿಗೆ ಹೊಸ ಪುಷ್ಪಪರಾಗವನ್ನೂ, ಮೂರನೆಯ ಗುಂಪಿಗೆ ಸಾಮಾನ್ಯ ಆಹಾರವನ್ನೂ ಕೊಟ್ಟು ಸಾಕಿದಾಗ, ಎರಡನೆಯ ಮತ್ತು ಮೂರನೆಯ ಗುಂಪಿನಲ್ಲಿದ್ದ ಅನೇಕ ಇಲಿಗಳು ರೋಗಕ್ಕೆತುತ್ತಾಗಿ ಸಾವನ್ನಪ್ಪಿದವು. ಒಂದನೆ ಗುಂಪಿನ ಇಲಿಗಳಲ್ಲಿ ಕೆಲವು ಮಾತ್ರ ರೋಗದ ಲಕ್ಷಣಗಳನ್ನು ತೋರಿಸಿದವು, ಆದರೆ ಸಾಯಲಿಲ್ಲ" ಎನ್ನುತ್ತಾರೆ ರಷ್ಯ ವಿಜ್ಞಾನಿಗಳು.

ಎಲ್ಲ ಜೀವಿಗಳು ತಮ್ಮ ರಕ್ಷಣೆಗಾಗಿ ಏನಾದರೊಂದು ಸಾಧನವನ್ನು ಪಡೆದಿರುತ್ತವೆ. ಜೇನು ತನ್ನ ರಕ್ಷಣೆ ಮತ್ತು ತನ್ನ ಬಳಗದ ರಕ್ಷಣೆಗಾಗಿ ತನ್ನಲ್ಲಿರುವ ವಿಷದ ಮುಳ್ಳನ್ನು ಉಪಯೋಗಿಸುತ್ತದೆ. ಕೆಲಸಗಾತಿ ಜೇನೊಂದು ತನ್ನ ಶತ್ರುವಿನ ಶರೀರದಲ್ಲಿ ತನ್ನ ವಿಷದ ಮುಳ್ಳನ್ನು ಚುಚ್ಚುತ್ತದೆ. ತತ್ ಕ್ಷಣ ಒಂದು ಗ್ರಂಥಿ ಯಿಂದ ಆಲ್ಕಲಿ (Alkali) ದ್ರವವೂ ಮತ್ತೊಂದು ಗ್ರಂಥಿಯಿಂದ ಆಸಿಡ್ (Acid) ದ್ರವವೂ ಹರಿದು ಬಂದು ಶತ್ರುವಿನ ಶರೀರವನ್ನು ಸೇರುತ್ತವೆ. ಕೇವಲ ೦.೦೦೦೩ ಗ್ರಾಮಿನಷ್ಟು ವಿಷ ಒಂದು ಸಾಮಾನ್ಯ ಕೀಟ ವನ್ನು ಕ್ಷಣಮಾತ್ರದಲ್ಲಿ ಕೊಲ್ಲುತ್ತದೆ. ಶತ್ರುವಿನ ಮೇಲೆ ಬಿದ್ದ ಕೆಲಸಗಾತಿ ಜೇನು ತನ್ನ ವಿಷದ ಮುಳ್ಳನ್ನು ಶತ್ರು ವಿನ ಶರೀರದಿಂದ ಹೊರಗೆಳೆದುಕೊಳ್ಳುವಾಗ ಸಾಮಾನ್ಯ

ವಾಗಿ ಮುಳ್ಳು ಮುರಿದು ಭಾರಿ ಗಾಯವಾಗಿ ಕೆಲಸಗಾತಿ ಜೇನು ಸಾವನ್ನಪ್ಪುತ್ತದೆ.

ನಾಗರ ಹಾವಿನ ವಿಷದಲ್ಲಿರುವ ಕೆಲವು ವಸ್ತು ವಿಶೇಷಗಳು ಜೇನಿನ ವಿಷದಲ್ಲಿಯೂ ಇವೆ ಎಂದು ಪ್ರವೀಣರು ನಿರ್ಧರಿಸಿದ್ದಾರೆ. ಸಂಧಿವಾತ, (Rheumatism,) ತಲೆಯ ನರಗಳ ವೇದನೆ (Neuralgia) ಮುಂತಾದ ರೋಗಗಳ ಮೇಲೆ ಜೇನಿನ ವಿಷದಿಂದ ತಯಾರಿಸಿದ ಇಂಜಕ್ಷನ್ನುಗಳು ತುಂಬಾ ಪರಿಣಾಮಕಾರಿಯಾಗಿವೆ. ರಷ್ಯಾದ ವೈದ್ಯಕೀಯ ಸಂಶೋಧನೆಯ ಕೇಂದ್ರಗಳಲ್ಲಿ ಜೇನು ಸಾಕಣೆಯ ವಿಭಾಗವನ್ನಿಟ್ಟುಕೊಂಡು ವಿಜ್ಞಾನಿಗಳು ಸಂಶೋಧನೆಗಳನ್ನು ನಡೆಸುತ್ತಿದ್ದಾರೆ. ರಾಣಿ ಜೇನಿಗೆ ಮೀಸಲಾಗಿರುವ 'ರಾಜರಸ' ಮಾನವನ ಅನೇಕ ರೋಗಗಳಿಗೆ ಪರಮೌಷಧಿಯಾಗಲಿದೆ.

ಸಂಶೋಧನೆಯ ಗರ್ಭದಲ್ಲಿ ಏನೇನು ಅಡಗಿದೆಯೋ ! ಜೇನಿನ ವಿಷವೂ ಮಾನವನಿಗೆ ಅಮೃತವಾಗಬಹುದು.

## ಹಲವು ಚೋದ್ಯಗಳು

## ಹಸುರುಬಣ್ಣದ ಸೂರ್ಯ

ಜೇನುಗಳು ಬೇರೆ ಬೇರೆ ಬಣ್ಣಗಳನ್ನು ತಿಳಿಯಬಲ್ಲವು ಎಂದು ಕಾರ್ಲ್ ವಾನ್ ಫ್ರಿಶ್ (Karl Van Frisch)

ಕಂಡುಹಿಡಿದರು. ಜೇನುಹುಳುಗಳು ಬೇರೆ ಬೇರೆ ಬಣ್ಣಗಳನ್ನು ತಿಳಿಯುವ ವಿಷಯದಲ್ಲಿ ಸಂಶೋಧನೆಗಳನ್ನು ಮಾಡಿದ ರಷ್ಯಾದ ವಿಜ್ಞಾನಿಗಳು ಕೆಂಪು, ಬಿಳಿ ಬಣ್ಣಗಳು ಜೇನು ಹುಳುಗಳಿಗೆ ಬೇರೆಯಾಗಿ ಕಾಣುತ್ತವೆ ಎಂದು ಹೇಳಿದ್ದಾರೆ. ಜೇನುಹುಳುಗಳಿಗೆ "ಕೆಂಪು ಬಣ್ಣದ ಹೂ ಬೂದು ಬಣ್ಣದ ಹೂವಾಗಿಯೂ ಊದು ಬಣ್ಣ ನೀಲಿಯಾಗಿಯೂ, ಬಿಳಿಯ ಬಣ್ಣ ಹಸುರಾಗಿಯೂ ಮತ್ತು ಹಸಿರುಬಣ್ಣ ಹಳದಿಯಾಗಿಯೂ ಕಾಣುತ್ತವೆ". ಸೂರ್ಯನು ಜೇನುಗಳಿಗೆ ಹಸುರಾಗಿ ಕಾಣುತ್ತಾನೆ.

**ಕಾಲಲ್ಲಿ ನಾಲಿಗೆ :**—ಜೇನೊಂದು ಉಪ್ಪಿನ ದ್ರವ ಚೆಲ್ಲಿರುವ ನೆಲದಮೇಲೆ ನಡೆಯುವಾಗ ಆ ದ್ರವದ ಕಡೆ ಗಮನಿಸದೆ ನಡೆಯುತ್ತದೆ. ಆದರೆ ಸಕ್ಕರೆ ದ್ರವವಿರುವ ನೆಲದಮೇಲೆ ನಡೆಯುವಾಗ ಆ ದ್ರವದ ಮೇಲೆ ಕಾಲಿಟ್ಟ ತತ್‌ಕ್ಷಣ ತನ್ನ ಹೀರುವ ಕೊಳವೆಯನ್ನು ಚಾಚಿ ಸಕ್ಕರೆಯ ದ್ರವವನ್ನು ಹೀರುತ್ತದೆ. ಆದ್ದರಿಂದ ಜೇನು ಕೆಲವು ಸಂದರ್ಭಗಳಲ್ಲಿ ಕಾಲಿನಿಂದ ರುಚಿಯನ್ನು ತಿಳಿಯಬಲ್ಲದು ಎಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ.

**ಹೊಟ್ಟೆಯಲ್ಲಿ ಹೃದಯ :**—ಎಲ್ಲ ಪ್ರಾಣಿಗಳಂತೆ ಹೃದಯ ಜೇನುಗಳ ಎದೆಯ ಭಾಗದಲಿಲ್ಲ. ಕೊಳವೆ

ಆಕಾರದ ಜೇನುಗಳ ಹೃದಯ ಅವುಗಳ ಉದರದಲ್ಲಿದೆ. ಒಂದು ಜೇನಿನ ಒಟ್ಟು ತೂಕದಲ್ಲಿ ಶೇಕಡ ೩೦ ಭಾಗ ರಕ್ತ ಇರುತ್ತದೆ (Haemolymph)

**ತಂದೆ ಇಲ್ಲದೆ ಮಗ :**—ರಾಣಿ ಜೇನು ಜನ್ಮ ಕೊಡುವ ಗಂಡು ಜೇನುಗಳಿಗೆ ತಾಯಿ ಮಾತ್ರ ಉಂಟು, ತಂದೆ ಇಲ್ಲ. ರಾಣಿಯ ಗರ್ಭದಲ್ಲಿ ಅಡಗಿರುವ ಗಂಡು ಜೀವಾಣು ಮತ್ತು ಹೆಣ್ಣು ಜೀವಾಣು ಸೇರಿದ ಮೊಟ್ಟೆ ಗಳಿಂದ ಹೆಣ್ಣು ಜೇನುಗಳು ಜನ್ಮಪಡೆಯುತ್ತವೆ. ಗಂಡು ಜೀವಾಣುವಿನೊಡನೆ ಸೇರದೆ ರಾಣಿಯ ಅಂಡಾಣುವಿನಿಂದ ಮಾತ್ರ ರೂಪ ತಾಳಿದ ಮೊಟ್ಟೆಗಳಿಂದ ಗಂಡು ಜೇನು ಗಳು ಜನ್ಮತಾಳುತ್ತವೆ. ಗಂಡು ಜೇನುಗಳ ಜನ್ಮಕ್ಕೆ ಅಜ್ಜ ಬೇಕು, ಆದರೆ ಅಪ್ಪನ ಅವಶ್ಯಕತೆಯಿಲ್ಲ.

**ಭೀಮಶಕ್ತಿ :**—ಒರಟಾದ ನೆಲದಮೇಲೆ ಭಾರವನ್ನು ಎಳೆಯುವ ಒಂದು ಕುದುರೆ ಸಾಮಾನ್ಯವಾಗಿ ತನ್ನ ತೂಕದಷ್ಟು ಪರಮಾವಧಿಯ ಭಾರವನ್ನು ಮಾತ್ರ ಎಳೆ ಯುತ್ತದೆ. ಆದರೆ ಜೇನುಗಳು ತಮ್ಮ ಇಪ್ಪತ್ತರಷ್ಟು ಭಾರವನ್ನು ಎಳೆಯುತ್ತವೆ.

**ಅತಿಸೂಕ್ಷ್ಮ ಶಬ್ದಗ್ರಹಣ :**—ಮಾನವನ ಕಿವಿ ಗಳಿಗೆ ಕೇಳಲು ಸಾಧ್ಯವೇ ಇಲ್ಲದ ಅತಿ ಸೂಕ್ಷ್ಮ ಶಬ್ದ ಗಳನ್ನು (Ultra-high-Frequency sounds)

ಜೇನುಗಳು ಕೇಳಬಲ್ಲವು ಮತ್ತು ಅತಿ ಸೂಕ್ಷ್ಮ ಶಬ್ದಗಳಲ್ಲಿ ಸಂಕೇತ ಸುದ್ದಿಗಳನ್ನು ಕಳುಹಿಸಬಲ್ಲವು.

## ಸಮಾಜ ಜೀವಿ

ಜೇನು ಸಮಾಜ ಜೀವಿ. ಪ್ರತಿಯೊಂದು ಜೇನು ಹುಳುವಿನ ದುಡಿಮೆ ತನ್ನ ಸಮಾಜದ ಕಲ್ಯಾಣಕ್ಕಾಗಿ. ಸಮಾಜವನ್ನು ಬಿಟ್ಟು ಜೇನುಗಳು ಒಂಟಿಯಾಗಿ ಬದುಕಲಾರವು. ಸುವ್ಯವಸ್ಥಿತ ಸಮಾಜವೇ ಜೇನುಗಳ ಜೀವ. ಪ್ರತಿಯೊಂದು ಒಂಟಿ ಜೇನಿನ ಸುಖಮಯ ಜೀವಿತಕ್ಕಾಗಿ ಈ ಸುವ್ಯವಸ್ಥಿತ ಸಮಾಜ. ಈ ಉದಾತ್ತ ತತ್ವಗಳ ತಳಹದಿಯ ಮೇಲೆ ಜೇನುಗಳ ಸಮಾಜ ಜೀವನ ನಿಂತಿದೆ. ಕಾರಣಾಂತರದಿಂದ ಜೇನುಗಳ ಗೂಡಿನಲ್ಲಿ ಆಹಾರ ಅಭಾವ ಒದಗಿದಾಗ ಪ್ರತಿಯೊಂದು ಜೇನು ಇದ್ದ ಆಹಾರವನ್ನೇ ಹಂಚಿಕೊಂಡು ಉಂಡು ಸಮಾಜದ ಅಭಿವೃದ್ಧಿಗಾಗಿ ದುಡಿಯುತ್ತದೆ; ನಿರ್ಮಲ ಸಮಾಜ ಜೀವನದ ಫಲವಾಗಿ ಬೇಗ ಸಂಪತ್ತನ್ನು ಪಡೆದು ನಲಿಯುತ್ತವೆ. ಆಹಾರ ಅಭಾವ ತಲೆದೋರಿದಾಗ ಆಹಾರವನ್ನು ಬಚ್ಚಿಟ್ಟು ಅನೇಕ ದುಡಿಯುವ ಜೀವಗಳನ್ನು ಹೀರುವ ಕೊಲೆಪಾತಕರ ತಂಡ ಜೇನುಗಳ ಪ್ರಪಂಚದಲ್ಲಿ ಇಲ್ಲ. ಜೇನುಗಳ ನಗರದಲ್ಲಿ ಸಾಮಾನ್ಯವಾಗಿ ಆಹಾರ

ಸಂಪತ್ತು ತುಂಬಿರುತ್ತದೆ. ಆದರೆ ಪ್ರತಿಯೊಂದು ಜೇನು ತನ್ನ ಕೆಲಸಕ್ಕೆ ತಕ್ಕಂತೆ ಎಷ್ಟು ಬೇಕೋ ಅಷ್ಟೇ ಆಹಾರವನ್ನು ಮಾತ್ರ ಸೇವಿಸುತ್ತದೆ. ಕೆಲಸಗಾತಿಯರಾದ ಜೇನುಗಳು ಹೆಚ್ಚಿಗೆ ಕೆಲಸ ಮಾಡುವಾಗ ಹೆಚ್ಚು ಆಹಾರವನ್ನೂ, ಕೆಲಸವಿಲ್ಲದಾಗ ಕಡಮೆ ಆಹಾರವನ್ನೂ ಸೇವಿಸಿ ತಮ್ಮ ಸಂಪಾದನೆಯ ಬಹುಭಾಗವನ್ನು ಸಮಾಜದ ಉಪಯೋಗಕ್ಕಾಗಿ ಕೂಡಿಡುತ್ತವೆ. ಸಮಾಜಕ್ಕೆ ಉಪಯೋಗಿಯಲ್ಲದ ಉಂಡಾಡಿ ಗಂಡುಗಳಿಗೆ ಅವಕಾಶವಿಲ್ಲ, ಜೇನುಗಳ ಸಮಾಜದಲ್ಲಿ. ಸುವ್ಯವಸ್ಥಿತವಾದ ಶಿಸ್ತಿನ ಬಳಗ ಜೇನುಗಳ ಸಮಾಜ.

---

## ಆಧಾರ ಗ್ರಂಥಗಳು


1) **Bees**—by I. Khalifman

2) **The Life of the bee**
—by Maeter link.

3) **Bee Keeping in South India**
—by S. Ramachandran.

4) **Insects**—U.S.D.A.

5) **Bee Keeping**
—by Kenneth K. Clark.

6) **The Dancing bees**
—by Karl Van Frisch.

7) **Dance of the bees**
—by Ernst Mannhein. (ಲೇಖನ)

8) **South Indian insects**

9) **The world of bees**
—by Gilbert Nizon.